CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೧೨, ೨೦೦೪ (ಶ್ರಾವಣ ೨೧, ಶಕ ವರ್ಷ ೧೯೨೬) | ಸಂಚಿಕೆ ೩೩ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ, ಇವರ ನ್ಯಾಯಾಲಯದ ನಡವಳಿ**

**ಸಂಖ್ಯೆ: ಡಿಟಿಸಿಆರ್:250/2003-04, ದಿನಾಂಕ: 24ನೇ ಜೂನ್, 2004**

| ಫಿರ್ಯಾದುದಾರರು | ವಿರುದ್ಧ | ಪ್ರತಿವಾದಿ |
|---|---|---|
| ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪವಲಯ. | | ಆರೋಪಿ ಪರಾರಿಯಾಗಿರುತ್ತಾರೆ. |

ದಿನಾಂಕ: 25.04.2004 ರಂದು ಸಾಯಂಕಾಲ 6.30 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪವಲಯ ಇವರು ಪಾಂಡವಪುರ ತಾಲ್ಲೂಕು ಡಾಮಡಹಳ್ಳಿ-ಬೆಟ್ಟಹಳ್ಳಿ ಹತ್ತಿರವಿರುವ ಶ್ರೀ ನಾಗರಾಜುರವರ ಜಮೀನಿನ ಪಕ್ಕದ ರಸ್ತೆಯಲ್ಲಿ ವಾಹನ ಲಾರಿ ಸಂಖ್ಯೆ: ಕೆಎ-06-ಎ4368 ರಲ್ಲಿ (ಚಾರ್ಸಿ ನಂ. 344057091970, ಇಂಜಿನ್ ಸಂಖ್ಯೆ: 692 ಪಿ 009/092984) ರಲ್ಲಿ ಅಕ್ರಮವಾಗಿ 510 ರಟ್ಟಿನ ಪೆಟ್ಟಿಗೆಯಲ್ಲಿ ಘಾಟು ವಾಸನೆಯಿಂದ ಕೂಡಿದ ಲೇಬಲ್ ಇಲ್ಲದ ಒಟ್ಟು 3.672 ಲೀ ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರ.ಮಾ.ವ.ಸಂ. 15/03-04 ರಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34 ಮತ್ತು 43ರ ಪ್ರಕಾರ ಕ್ರಮ ಜರುಗಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಲಾರಿ ಸಂಖ್ಯೆ: ಕೆಎ-06/ಎ-4368ರ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತುಮಕೂರು- ಇವರಿಗೆ ಅಬಕಾರಿ ಉಪ-ನಿರೀಕ್ಷಕರು, ಪಾಂಡವಪುರ ಉಪವಲಯ- ಇವರು ಪತ್ರ ಬರೆದು “ಬಿ” ವಹಿಯನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನ ಲಾರಿ ಸಂಖ್ಯೆ: ಕೆಎ-06/ಎ-4368 (ಚಾರ್ಸಿ ನಂ. 344057091970, ಇಂಜಿನ್ ಸಂಖ್ಯೆ: 692 ಪಿ 009/ 092984) ಎಂದು ಪ್ರಕರಣ ದಾಖಲಾಗಿರುತ್ತದೆ. “ಬಿ” ವಹಿಯಲ್ಲಿ ಬಜಾಜ್ ಆಟೋ ರಿಕ್ಷಾ ಸಂಖ್ಯೆಯಾಗಿದ್ದು, ಚಾರ್ಸಿ ಸಂ: 24 ಎಫ್.ಬಿಕೆಎಂ 97496, ಇಂಜಿನ್ ಸಂಖ್ಯೆ:ಎಯುಎಂ.ಬಿಕೆಎಂ-13960 ಎಂದು ಕಂಡು ಬಂದಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪವಲಯ- ಇವರು ದಿನಾಂಕ: 13.05.2004ರಂದು ವರದಿಯನ್ನು ಸಲ್ಲಿಸಿ ವಶಪಡಿಸಿಕೊಂಡ ವಾಹನ ಲಾರಿ ಸಂಖ್ಯೆ: ಕೆಎ-06/ಎ-4368 ಗೂ ಮತ್ತು “ಬಿ” ವಹಿಗೂ ತಾಳೆ ನೋಡಲಾಗಿ ಒಂದಕ್ಕೊಂದು ತಾಳೆಯಾಗಿರುವುದಿಲ್ಲವೆಂದು ಹಾಗೂ ಇದುವರೆವಿಗೂ ವಾಹನ ಮತ್ತು ಮದ್ಯ ತಮ್ಮದೆಂದು ಯಾರೂ ವಾರಸುದಾರರು ಮುಂದೆ ಬಾರದ ಕಾರಣ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ಏತನ್ಮಧ್ಯೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ:28.05.2004ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿ ವಾಹನ ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸತಕ್ಕದ್ದೆಂದು, ಒಂದು ವೇಳೆ ನಿಗದಿತ ಅವಧಿಯೊಳಗೆ

ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಾಗಿ ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವು ನಕಲಿ ಎಂದು ಮದ್ಯಸಾರದ ಅಂಶ $62.1^0$ ಯು.ಪಿ. ಇರುವುದಾಗಿ ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 510 ರಟ್ಟಿನ ಪೆಟ್ಟಿಗೆಯಲ್ಲಿ ಒಟ್ಟು 3672 ಲೀ. ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ 2 ತಿಂಗಳು ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ಅಲ್ಲದೆ ವಶಪಡಿಸಿಕೊಂಡ ವಾಹನ ನೋಂದಣೆ ಸಂಖ್ಯೆಗೂ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ "ಬಿ" ವಹಿಯನ್ನು ಪರಿಶೀಲಿಸಲಾಗಿ ಒಂದಕ್ಕೊಂದು ತಾಳೆಯಾಗಿರುವುದಿಲ್ಲ. ಇವುಗಳನ್ನು ನೋಡಲಾಗಿ ಬೇರೆ ವಾಹನದ ನೋಂದಣೆ ಫಲಕವನ್ನು ಹಾಕಿಕೊಂಡು ಚಾಲನೆ ಮಾಡಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್: 250: 03-04, ದಿನಾಂಕ: 24ನೇ ಜೂನ್, 2004**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪವಲಯ-ರವರು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: ಕೆಎ-6/ಎ-4368 ನ್ನು ಮತ್ತು 3672 ಲೀ. (ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದ ಮದ್ಯವನ್ನು ಹೊರತುಪಡಿಸಿ) ನಕಲಿ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ ಮೂವತ್ತು (30) ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.1001

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಗಳು**

**ಸಂಖ್ಯೆ: ಡಿಆರ್‌ಟಿ/ ಎಲ್‌ಕ್ಯೂಡಿ/71/97-98, ದಿನಾಂಕ: 16ನೇ ಜೂನ್, 2004**

**ವಿಷಯ :** ಸಮಾಪನೆಯಲ್ಲಿರುವ ಶ್ರೀರಾಮ ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ, ನೊಣವಿನಕೆರೆ, ತಿಪಟೂರು ತಾಲ್ಲೂಕು ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಪತ್ರ ಸಂಖ್ಯೆ: ಸನಿ-34/ಎಲ್‌ಕ್ಯೂಡಿ/160/97-98, ದಿನಾಂಕ:08.09.2000.
2. ಈ ಕಛೇರಿ ನೋಟೀಸ್ ಸಂಖ್ಯೆ:ಡಿಆರ್‌ಟಿ/ ಎಲ್‌ಕ್ಯೂಡಿ/ ಸಿಆರ್-65/ 97-98 ದಿನಾಂಕ: 17.09.1997
3. ಸಮಾಪನೆ ಆದೇಶ ಡಿಆರ್‌ಟಿ/ ಡಿಎಲ್‌ಎಸ್/ಸಿಆರ್-71/97-98, ದಿನಾಂಕ: 13.11.1997.
4. ಈ ಕಛೇರಿಯ ಸಮಾಪನಾಧಿಕಾರಿ ಬದಲಾವಣೆ ಆದೇಶ ಸಂಖ್ಯೆ: ಡಿಆರ್‌ಟಿ/ ಎಲ್‌ಕ್ಯೂಡಿ/ 109/2000-01, ದಿನಾಂಕ: 24.09.2003
5. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ, ತಿಪಟೂರು ಇವರ ನೋಂದಣಿ ಪ್ರಸ್ತಾವೆ ಪತ್ರದ ದಿನಾಂಕ: 28.05.2004.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ಶ್ರೀ ರಾಮ ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ, ನೊಣವಿನಕೆರೆ, ತಿಪಟೂರು ತಾಲ್ಲೂಕು ಈ ಸಂಘವು ನೋಂದಣೆ ಸಂಖ್ಯೆ ಎಆರ್‌ಟಿ 63 ದಿನಾಂಕ: 16.03.1961 ಆಗಿದ್ದು, ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 08.09.2000 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ (2)ರ ಮೇರೆಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಜಾಯಿಷಿಯಾಗಲೀ ತಕರಾರುಗಳು ಆಕ್ಷೇಪಣೆಗಳು ಬಾರದಿದ್ದುದರಿಂದ ಉಲ್ಲೇಖ (3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣೆ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಸಮಾಪನಾಧಿಕಾರಿಯವರು ನೋಂದಣಿ ರದ್ದತಿಗೆ ಕ್ರಮ ಕೈಗೊಂಡಿಲ್ಲದಿರುವುದರಿಂದ ಉಲ್ಲೇಖ (4)ರ ಮೇರೆಗೆ ಸಮಾಪನಾಧಿಕಾರಿಯನ್ನು ಬದಲಾಯಿಸಿ, ಸಹಕಾರ ಸಂಘಗಳ ನಿರೀಕ್ಷಕರು, ತಿಪಟೂರು ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿ ಆದೇಶ ನೀಡಲಾಯಿತು. ನಂತರ ಈ ಬಗ್ಗೆ ಸಮಾಪನಾಧಿಕಾರಿಯವರು ಸಂಘದ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯೊಂದಿಗೆ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಉಲ್ಲೇಖ(5)ರ ಮೇರೆಗೆ ಸಮಾಪನಾಧಿಕಾರಿ ಶ್ರೀ ರಾಮ ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ, ನೊಣವಿನಕೆರೆ, ತಿಪಟೂರು ತಾಲ್ಲೂಕು ಇವರು ಸಹಕಾರ ಸಂಘಗಳ ಸಹಾಯಕ ನಿಬಂಧಕರವರು ತಿಪಟೂರು ಉಪವಿಭಾಗ, ತಿಪಟೂರು ಇವರ ಮೂಲಕ ಈ ಕಛೇರಿಗೆ ಸಲ್ಲಿಸಿರುತ್ತಾರೆ.

ಪ್ರಯುಕ್ತ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ರಾಮ ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ, ನೊಣವಿನಕೆರೆ, ತಿಪಟೂರು ತಾಲ್ಲೂಕು ಇದರ ನೋಂದಣಿ ಸಂಖ್ಯೆ ಎಆರ್‌ಟಿ/ 163 ದಿನಾಂಕ: 16.03.1961 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯಿದೆ 1959ರ ಕಲಂ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001 ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 16.06.2004ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**
ಸಹಕಾರ ಸಂಘಗಳ ಉಪನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1002

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ

**ಸಂಖ್ಯೆ: 24/ಸಂವಿ/ಸಿ.ಓ.ಪಿ/2003, ದಿನಾಂಕ: 8ನೇ ಜುಲೈ, 2004**

ಬೆಂಗಳೂರು ನಗರ ಶೇಷಾದ್ರಿಪುರಂ ಪೊಲೀಸ್ ಠಾಣೆಯ ಸರಹದ್ದಿಗೆ ಸೇರಿದ ಮಾಧವನಗರ ನೆಹರು ವೃತ್ತದ ಬಳಿ ಇರುವ ರೈಲ್ವೆ ಕೆಳ ಸೇತುವೆಯನ್ನು ವಿಸ್ತರಣೆ ಮಾಡುವ ಕಾಮಗಾರಿ ಕೆಲಸವನ್ನು ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ರೈಲ್ವೆ ಇಲಾಖೆಯವರು ಕೈಗೊಂಡಿರುತ್ತಾರೆ. ಈ ಕಾಮಗಾರಿ ಕೆಲಸವು ಪೂರ್ಣಗೊಳ್ಳಲು ಸುಮಾರು 3 ತಿಂಗಳ ಕಾಲಾವಧಿ ಹಿಡಿಯುವುದರಿಂದ ಈ ರಸ್ತೆಯಲ್ಲಿನ ವಾಹನ ಸಂಚಾರವನ್ನು ಪೂರ್ಣವಾಗಿ ಸ್ಥಗಿತಗೊಳಿಸಬೇಕಾಗಿರುವುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರದ ಉದ್ದೇಶದಿಂದ ವಾಹನಗಳ ಸಂಚಾರವನ್ನು ಪರ್ಯಾಯ ರಸ್ತೆಗಳ ಮೂಲಕ ಸಂಚರಿಸುವಂತೆ ವ್ಯವಸ್ಥೆ ಮಾಡಿಕೊಡುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ನಾಗಪ್ಪ ಬೀದಿ:** ಸ್ವಸ್ತಿಕ್ ವೃತ್ತದಿಂದ ನೆಹರು ವೃತ್ತದ ಕಡೆಗೆ (ಪಶ್ಚಿಮದಿಂದ ಪೂರ್ವದ ಕಡೆಗೆ) ನಾಗಪ್ಪ ಬೀದಿ ರಸ್ತೆಯಲ್ಲಿ ಎಲ್ಲಾ ತರಹದ ವಾಹನ ಸಂಚಾರವನ್ನು ನಿಷೇಧಿಸಿದೆ. ಈ ವಾಹನ ಸಂಚಾರವನ್ನು ಸ್ವಸ್ತಿಕ್ ವೃತ್ತದಿಂದ ಸುಬೇದಾರ್ ಛತ್ರಂ ರಸ್ತೆಯಿಂದ ಆನಂದರಾವ್ ವೃತ್ತ, ಶೇಷಾದ್ರಿ ರಸ್ತೆ, ಸುಬ್ಬಣ್ಣ ಸರ್ಕಲ್ ಮುಖಾಂತರ ಸಾಗಿ ರೇಸ್‌ಕೋರ್ಸ್ ರಸ್ತೆಯನ್ನು ಸೇರಲು ಅವಕಾಶ ಕಲ್ಪಿಸಲಾಗಿದೆ.
2. **ಹರೇಕೃಷ್ಣ ರಸ್ತೆ:** ಶಿವಾನಂದ ವೃತ್ತದಿಂದ ನೆಹರು ವೃತ್ತದ ಕಡೆಗೆ ದ್ವಿಚಕ್ರ ವಾಹನ ಹಾಗೂ ಲಘು ವಾಹನಗಳನ್ನು ಹೊರತುಪಡಿಸಿ ಇತರೆ ಎಲ್ಲಾ ತರಹದ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಕೆ.ಎಸ್.ಆರ್.ಟಿ.ಸಿ. ಮತ್ತು ಬಿ.ಎಂ.ಟಿ.ಸಿ. ಬಸ್ಸುಗಳು ಹಾಗೂ ಇತರೆ ಸರಕು ಸಾಗಣೆ ವಾಹನಗಳ ಸಂಚಾರವನ್ನು ಕುಮಾರ ಕೃಪ ರಸ್ತೆ ಮತ್ತು ರೇಸ್‌ಕೋರ್ಸ್ ರಸ್ತೆ ಮುಖಾಂತರ ಆನಂದರಾವ್ ವೃತ್ತಕ್ಕೆ ಹೋಗಿ ಆನಂದರಾವ್ ವೃತ್ತದಲ್ಲಿ ಬಲ ತಿರುವು ಪಡೆದುಕೊಂಡು ಸುಬೇದಾರ್ ಛತ್ರಂ ರಸ್ತೆ ಮುಖಾಂತರ ಶೇಷಾದ್ರಿಪುರಂ ಹಾಗೂ ಮಲ್ಲೇಶ್ವರಂ ಕಡೆಗೆ ಹೋಗಲು ಅವಕಾಶ ಕಲ್ಪಿಸಲಾಗಿದೆ.
3. **ರೇಸ್‌ಕೋರ್ಸ್ ರಸ್ತೆ:** ಆನಂದರಾವ್ ವೃತ್ತದಿಂದ ಜನತಾದಳ ಕಛೇರಿ ವರೆಗೆ (ರಂಗಸ್ವಾಮಿ ಸರ್ಕಲ್) ರೇಸ್‌ಕೋರ್ಸ್ ರಸ್ತೆಯಲ್ಲಿ ಪಶ್ಚಿಮದಿಂದ ಪೂರ್ವದ ಕಡೆಗೆ ಎಲ್ಲಾ ತರಹದ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ. ಈ ಸಂಚಾರವು ಆನಂದರಾವ್ ವೃತ್ತದಿಂದ ಶೇಷಾದ್ರಿ ರಸ್ತೆಯಲ್ಲಿ ಸಾಗಿ ಸುಬ್ಬಣ್ಣ ಸರ್ಕಲ್‌ನಲ್ಲಿ ಎಡ ತಿರುವು ಪಡೆದುಕೊಂಡು ರೇಸ್‌ಕೋರ್ಸ್ ರಸ್ತೆ ಮುಖಾಂತರ ಸಾಗಲು ಅವಕಾಶ ಕಲ್ಪಿಸಲಾಗಿದೆ.
4. **ಲೂಪ್ ರಸ್ತೆ (ರೇಸ್‌ಕೋರ್ಸ್ ರಸ್ತೆ):** ಈ ರಸ್ತೆಯಲ್ಲಿ ಜನತಾದಳ ಕಛೇರಿ ವೃತ್ತದಿಂದ ಸುಬ್ಬಣ್ಣ ವೃತ್ತದವರೆಗೆ ಉತ್ತರದಿಂದ ದಕ್ಷಿಣದ ಕಡೆಗೆ ಸಾಗುವ ಎಲ್ಲಾ ತರಹದ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 17.07.2004 ರಿಂದ 3 ತಿಂಗಳ ಕಾಲ ತಾತ್ಕಾಲಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 07.07.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1003

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**
**ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ**

**ಸಂಖ್ಯೆ: ಎಫ್‌ಓಸಿ-ಸಿಓಎನ್-ಸಿಆರ್-7/04-05, ದಿನಾಂಕ: 30ನೇ ಜೂನ್, 2004**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಉಂಬ್ಲೆಬೈಲು ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಯಮಹ ಆರ್‌ಎಕ್ಸ್ 100 ಬೈಕ್ ನೋಂದಣಿ ಸಂಖ್ಯೆ: ಕೆಎ-17-ಇ-8387 | ವಲಯ ಅರಣ್ಯಾಧಿಕಾರಿ, ಉಂಬ್ಲೆಬೈಲು ಇವರ ಅರಣ್ಯ ಮೊಕದ್ದಮೆ ಸಂಖ್ಯೆ: 37/04-05 ದಿನಾಂಕ: 24.06.04. | ಐಎಲ್‌ಐ/ 3655 ಡಿ | ಐಎಲ್‌ಐ/ 186551 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 1004

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ**
**ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ:ಕಾನಪ:18/04/280, ದಿನಾಂಕ: 8ನೇ ಜುಲೈ, 2004**

**ಅರ್ಜಿದಾರರು:**
1. ಶ್ರೀಮತಿ ಚನ್ನವ್ವ W/o ಬಸಪ್ಪ ಜಂಗಣ್ಣವರ್,
2. ಶ್ರೀಮತಿ ಕಳಕವ್ವ W/o ಬಾಳಪ್ಪ ಜಂಗಣ್ಣವರ್,
   ಜಕ್ಲಲಿ: ರೋಣ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಸುರೇಶ್‌ಬಾಬು S/o ದೊಡ್ಡವೀರಪ್ಪ,
   ಜಂಗಣ್ಣವರ್, ಜಕ್ಲಲಿ, ರೋಣ ತಾಲ್ಲೂಕು.
2. ಮ್ಯಾನೇಜರ್,
   ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ.,

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಚನ್ನವ್ವ ಮತ್ತು ಕಳಕವ್ವ ಇವರು, ತಾವು ಮೃತ ಬಸಪ್ಪ ಬಾಳಪ್ಪ ಜಂಗಣ್ಣವರ್, ಇವರ ಹೆಂಡತಿ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸಪ್ಪ ಇವರು ಒಂದನೇ ಪ್ರತಿವಾದಿಗಳಾದ ಸುರೇಶ್‌ಬಾಬು ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿ.ಆರ್. 1006

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ:ಕಾನಪ:17/04/266, ದಿನಾಂಕ: 30ನೇ ಜೂನ್, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಅರ್ಜಿದಾರರು:
1. ಮಲ್ಲೇಶ್ ಲಕ್ಷ್ಮಣ ಮರಾಠೆ,
2. ರೇಣುಕ ಲಕ್ಷ್ಮಣ ಮರಾಠೆ,
3. ಲಕ್ಷ್ಮಣ ಕೃಷ್ಣಪ್ಪ ಮರಾಠೆ,
ಎಲ್ಲರೂ ಗುಡ್ಡದ ಬೂದಿಹಾಳ, ವಾಸ: ಮುಂಡರಗಿ ತಾಲ್ಲೂಕು ಗದಗ ಜಿಲ್ಲೆ.

ಪ್ರತಿವಾದಿಗಳು:
1. ಕೆ.ಎನ್. ದಿನೇಶ್ S/o ಕೆ.ಕೆ. ನಾಗಪ್ಪಗೌಡ, ಕುರುಬರಹಳ್ಳಿ, ಮಹಾಲಕ್ಷ್ಮಿಪುರ, ಬೆಂಗಳೂರು ಜಿಲ್ಲೆ.
2. ದಿ ಡಿವಿಜನಲ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಮಲ್ಲೇಶ್, ರೇಣುಕ, ಲಕ್ಷ್ಮಣ ಇವರು, ತಾವು ಮೃತಳಾದ ದೇವಮ್ಮ ಇವರ ಮಕ್ಕಳು ಮತ್ತು ಗಂಡ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದೇವಮ್ಮ ಇವರು ಒಂದನೇ ಪ್ರತಿವಾದಿಗಳಾದ ಕೆ.ಎನ್. ದಿನೇಶ್ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿ.ಆರ್. 1007

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ:ಕಾನಪ:16/04/262, ದಿನಾಂಕ: 6ನೇ ಜುಲೈ, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಅರ್ಜಿದಾರರು:
1. ಮೇರಿ D/o ಡೊಮಿನಿಕ್ ರೀಗೋ @ ಶ್ರೀಮತಿ ಮೇರಿ Wo ಮಾರುತಿ ಕದಂ, ಅಬ್ಬಿಗೇರಿ, ವಾಸ: ರೋಣ ತಾಲ್ಲೂಕು.
2. ಅಮೀದಾ ಬೇಗಂ D/o ಮಹಮದ್‌ಗೌಸ್ ನಾಲಬಂದಿ @ ಅಮೀದಾ W/o ಸುರೇಶ್‌ಕದಂ.
3. ಸೀಮಾ D/o ಸುರೇಶ್‌ಕದಂ
4. ಅಮೀನ್ S/o ಸುರೇಶ್‌ಕದಂ

ಪ್ರತಿವಾದಿಗಳು:
1. ಶ್ರೀ ರವಿಕುಮಾರ್ S/o ದೊಡ್ಡ ಬಸಪ್ಪ ಯತ್ನಟ್ಟಿ, ಮಾಲಿಕರು, ವಾಹನ: ಕೆಎ 25/ 2847, ಅಬ್ಬಿಗೇರಿ, ರೋಣ ತಾಲ್ಲೂಕು.
2. ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಶೂರೆನ್ಸ್ ಕಂ. ಲಿ., ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಶ್ರೀಮತಿ ಮೇರಿ, ಅಮೀದಾ, ಸೀಮಾ ಮತ್ತು ಅಮೀನ್ ಇವರು, ತಾವು ಮೃತ ಸುರೇಶ S/o ಮಾರುತಿ ಕದಂ, ಇವರ ತಾಯಿ, ಹೆಂಡತಿ ಮತ್ತು ಮಕ್ಕಳೆಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸುರೇಶ್ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ರವಿಕುಮಾರ್ ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿ.ಆರ್. 1008

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪ ವಿಭಾಗ-2, ಬೈಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-20/ಎಫ್/2004, ದಿನಾಂಕ: 2ನೇ ಜುಲೈ, 2004**

**ಅರ್ಜಿದಾರರು:**

1. ಪರಮೇಶ್ವರ ಪೂಜಾರಿ,
2. ಶ್ರೀಮತಿ ಸರೋಜಿನಿ, ಪರಮೇಶ್ವರ ಪೂಜಾರಿಯವರ ಮಡದಿ.
3. ಸುಜೀತಾ ಕುಂದರ್, ಪರಮೇಶ್ವರ ಪೂಜಾರಿಯವರ ಮಗಳು.
4. ಸುಜೀಯ ಕುಂದರ್, ಪರಮೇಶ್ವರ ಪೂಜಾರಿಯವರ ಮಗಳು
5. ಶರ್ಮಿಳಾ ಕುಂದರ್, ಪರಮೇಶ್ವರ ಪೂಜಾರಿಯವರ ಮಗಳು.
   ಕೋಟಪಾಲು ಹೌಸ್: ನಾವೂರು ವಿಲೇಜ್ ಬಂಟ್ವಾಳ ತಾಲ್ಲೂಕು. ಪೋಸ್ಟ್ ನಾವೂರು.

**ವಿರುದ್ಧ**

**ಪ್ರತಿವಾದಿಗಳು:**

1. ನಾಗರಾಜ್ ಬಿನ್ ಬೋಜಪ್ಪ ರಾಜಾಂಜಲಿ ನಿವಾಸ, ಚಿತ್ರಪುರ, ಚಿತ್ರಪುರ ಟೆಂಪಲ್ ಹತ್ತಿರ ಕುಲ್ವಾ, ಕುಲ್ವಾ ವಿಲೇಜ್ ಮತ್ತು ಅಂಚೆ, ಮಂಗಳೂರು ತಾಲ್ಲೂಕು.
2. ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂಪನಿ ಲಿಮಿಟೆಡ್, ಬ್ರಾಂಚ್ ಆಫೀಸ್, ಬ್ರಿಜ್ ರಸ್ತೆ, ಬಲ್ಮಠ, ಮಂಗಳೂರು-575001.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಪರಮೇಶ್ವರ ಪೂಜಾರಿ, ಇವರು ತಮ್ಮ ಮಗನಾದ ಶ್ರೀ ರಮೇಶ್‌ಕುಂದರ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 27.01.2004ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ
ಉಪವಿಭಾಗ-2, ಮಂಗಳೂರು.

ಪಿ.ಆರ್. 1009

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪ ವಿಭಾಗ-2, ಬೈಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-23/ಎಫ್/2004, ದಿನಾಂಕ: 1ನೇ ಜುಲೈ, 2004**

**ಅರ್ಜಿದಾರರು:**

1. ಶ್ರೀಮತಿ ಪೂನಮ್‌ದೇವಿ, ಮೃತ ಕಿಶೋರ್ ಕುಮಾರ್‌ರವರ ಮಡದಿ.
2. ಶಿವಾನಿ ಕುಮಾರಿ, ಮೃತ ಕಿಶೋರ್ ಕುಮಾರ್‌ರವರ ಮಗಳು (ಅಪ್ರಾಯಸ್ಥೆ).
3. ಸವಿತಾ ಕುಮಾರಿ, ಮೃತ ಕಿಶೋರ್ ಕುಮಾರ್‌ರವರ ಮಗಳು (ಅಪ್ರಾಯಸ್ಥೆ).
4. ಶ್ಯಾಮ್‌ಸುಂದರ ಕುಮಾರ್, ಮೃತ ಕಿಶೋರ ಕುಮಾರ್‌ರವರ ಮಗ.
5. ಶ್ರೀಮತಿ ಸುತೀನಾದೇವಿ ಶಾಮ್‌ಸುಂದರ್‌ರವರ ಮಡದಿ,
   ಆಶೀರ್ವಾದ ಬಿಲ್ಡಿಂಗ್ ಜಿ.ಹೆಚ್.ಎಸ್. ರೋಡ್, ಮಂಗಳೂರು, ದಕ್ಷಿಣ ಕನ್ನಡ.

**ವಿರುದ್ಧ**

**ಪ್ರತಿವಾದಿಗಳು:**

1. ರಾಮ ಕಾಮತ್ ಅಂಡ್ ಕಂ. ಮ್ಯಾನೇಜಿಂಗ್ ಪಾರ್ಟನರ್, 402, ಕ್ಲಾಸಿಕ್ ಪ್ಯಾರಡೈಸ್, ಕೆ.ಎಸ್.ರಾವ್ ರಸ್ತೆ, ಮಂಗಳೂರು-575001.
2. ದಿ ಓರಿಯೆಂಟಲ್ ಇನ್ಶೂರೆನ್ಸ್ ಕಂ.ಲಿ., ಸಿಟಿಬ್ರಾಂಚ್ 2, ಪ್ರಲ್ಕಂಡ ಬಿಲ್ಡಿಂಗ್, 2ನೇ ಮಹಡಿ, ಪಿ.ಎಂ. ರಾವ್ ರಸ್ತೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಪೂನಮ್ ದೇವಿ, ಇವರು ತಮ್ಮ ಗಂಡನಾದ ಶ್ರೀ ಕಿಶೋರ್‌ಕುಮಾರ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 09.03.2004ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ
ಉಪವಿಭಾಗ-2, ಮಂಗಳೂರು.

ಪಿ.ಆರ್. 1010

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ:ಪ್ರ: ಎಫ್-11/2004, ದಿನಾಂಕ: 21ನೇ ಜೂನ್, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಗ್ಯಾನ್‌ಕೌರ್
2. ಹರ್‌ಪ್ರೀತ್ ಸಿಂಗ್
   ದಿಲ್ಲಾನ್ ಪಂಜಾಬಿ ಡಾಬ.
   ವಾಸ: ಗುಡ್ಡದ ರಂಗವ್ವನಹಳ್ಳಿ, ಚಿತ್ರದುರ್ಗ ತಾಲ್ಲೂಕು.

1. ಭೂಪಿಂದರ್ ಸಿಂಗ್ ಅಮರ್‌ಸಿಂಗ್, ಲಾರಿ ಮಾಲಿಕರು, ಸಂಖ್ಯೆ: ಎಂಹೆಚ್-06/8354 ಮುಂಬೈ.
2. ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ನವಿ ಮುಂಬೈ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಗ್ಯಾನ್‌ಕೌರ್, ಶ್ರೀ ಹರ್‌ಪ್ರೀತ್ ಸಿಂಗ್, ಇವರು ತಾವು ಮೃತ ಹರ್‌ಜಿಂದರ್ ಸಿಂಗ್, ಇವರ ತಾಯಿ ಮತ್ತು ತಮ್ಮ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹರ್‌ಜಿಂದರ್ ಸಿಂಗ್ ಇವರು ಒಂದನೇ ಪ್ರತಿವಾದಿಗಳಾದ ಭೂಪಿಂದರ್ ಸಿಂಗ್ ಅಮರ್‌ಸಿಂಗ್ ಇವರಲ್ಲಿ ಲಾರಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 1011

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ:ಪ್ರ: ಎಫ್-12/2004, ದಿನಾಂಕ: 21ನೇ ಜೂನ್, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಜಬೀನಾ
2. ಖಾತೂನ್ ಬೀ
3. ದಾದಾಪೀರ್
4. ಮೊ: ಸಾದಿಕ್, ವಾಸ: ಹಿರಿಯೂರು.

1. ಮೊಹಮದ್ ರಿಜ್ವಾನ್, ಲಾರಿ ಮಾಲಿಕರು, ಹಿರಿಯೂರು.
2. ನ್ಯಾಷನಲ್ ಇನ್ ಕಂ.ಲಿ., ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಜಬೀನಾ, ಖಾತೂನ್ ಬೀ, ದಾದಾಪೀರ್, ಮೊ: ಸಾದಿಕ್, ಇವರು ತಾವು ಮೃತ ಮೊಹಮದ್ ಇಸ್ಮಾಯಿಲ್, ಇವರ ಹೆಂಡತಿ, ತಾಯಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೊಹಮದ್ ಇಸ್ಮಾಯಿಲ್, ಇವರು ಒಂದನೇ ಪ್ರತಿವಾದಿಗಳಾದ ಮೊಹಮದ್‌ರಿಜ್ವಾನ್, ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 1012

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪ ವಿಭಾಗ-2, ಬೈಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-21/ಎಫ್/2004, ದಿನಾಂಕ: 18ನೇ ಜೂನ್, 2004**

**ಅರ್ಜಿದಾರರು:**

1. ಉಮ್ಮರಬ್ಬ,
ಹಮ್ಮಬ್ಬರವರ ಮಗ, ಉಲಿತೊಟ್ಟು ಹೌಸ್
ನೆಲ್ಗಡಿ ವಿಲೇಜ್ ಮತ್ತು ಅಂಚೆ,
ಪುತ್ತೂರು ತಾಲ್ಲೂಕು.
2. ಹಾಸಿಯಮ್ಮ
ಉಮ್ಮರಬ್ಬರವರ ಮಡದಿ, ಉಲಿತೊಟ್ಟು
ಹೌಸ್, ನೆಲ್ಗಡಿ ವಿಲೇಜ್ ಮತ್ತು ಅಂಚೆ,
ಪುತ್ತೂರು ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1. ಪುತ್ತು ಕುನ್ನಿಹಾಜಿ, ಹಮ್ಮರಬ್ಬರವರ ಮಗ, ನೆಲ್ಗಡಿ
ವಿಲೇಜ್ ಮತ್ತು ಅಂಚೆ, ಪುತ್ತೂರು ತಾಲ್ಲೂಕು.
2. ಬ್ರಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ
ಇನ್ಸೂರೆನ್ಸ್ ಕಂ.ಲಿ., ಪ್ರಭು ಬಿಲ್ಡಿಂಗ್ ಮೈನ್ ರೋಡ್
ಪುತ್ತೂರು ತಾಲ್ಲೂಕು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಉಮ್ಮರಬ್ಬ, ಇವರು ತಮ್ಮ ಮಗನಾದ ಶ್ರೀ ಲತೀಫ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 21.01.2004ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ
ಉಪವಿಭಾಗ-2, ಮಂಗಳೂರು.

ಪಿ.ಆರ್. 1013

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಕೋಲಾರ ಜಿಲ್ಲೆ, ಕೋಲಾರ**

**ಪ್ರಕಟಣೆ**

**ಸಂ.ಜಿಸಕಅ: ಯೋಜನೆ: ಸಿಆರ್-6:2004-05, ದಿನಾಂಕ: 6ನೇ ಜುಲೈ, 2004**

**ವಿಷಯ :** 2003-04ನೇ ಸಾಲಿಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ವಕೀಲ ತರಬೇತಿಗಾಗಿ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್‌ಡಬ್ಲ್ಯೂ 89, ದಿನಾಂಕ: 2.11.1990.

2004-05ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ವಕೀಲ ತರಬೇತಿಗಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು**

1) ಎಲ್.ಎಲ್.ಬಿ. ಪರೀಕ್ಷೆಯಲ್ಲಿ ಪಾಸು ಮಾಡಿದ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಅಭ್ಯರ್ಥಿಗಳು ಪ್ರಯೋಜನೆ ಪಡೆಯಲು ಅರ್ಹರಾಗಿರುತ್ತಾರೆ. ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿ ಎರಡು ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಗಳ ಪ್ರಕಾರ ಜಿಲ್ಲಾ ಆಯ್ಕೆ ಸಮಿತಿಯ ಸಂದರ್ಶನಕ್ಕೆ ಕರೆದು ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

3) ತರಬೇತಿಯ ಅವಧಿ 4 ವರ್ಷವಿದ್ದು, ತರಬೇತಿಯ ಅವಧಿಯಲ್ಲಿ ರೂ.1,000-00ಗಳ ಮಾಸಿಕ ಶಿಷ್ಯವೇತನ ನೀಡಲಾಗುವುದು.

4) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಹೆಚ್ಚು ವಕೀಲ ವೃತ್ತಿಯಲ್ಲಿ ಅನುಭವವಿದ್ದವರ ಹತ್ತಿರ ತರಬೇತಿಗಾಗಿ ನಿಯೋಜಿಸಲಾಗುವುದು.

5) ಅಭ್ಯರ್ಥಿಗಳ ವಯೋಮಿತಿ 35 ವರ್ಷಕ್ಕೆ ಮೀರಿರಬಾರದು. (ಅರ್ಜಿ ಸಲ್ಲಿಸಿದ ಕಡೆಯ ದಿನಾಂಕದೊಳಗೆ ಇರಬೇಕು)

6) ತರಬೇತಿ ಸೌಲಭ್ಯವನ್ನು ಪಡೆಯಲು ಇಚ್ಛಿಸುವ ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿರಬೇಕು. ಒಂದು ವೇಳೆ ಅವರುಗಳು ತಮ್ಮ ಹೆಸರುಗಳನ್ನು ನೊಂದಾಯಿಸದಿದ್ದರೆ ತರಬೇತಿ ಭತ್ಯೆಯನ್ನು ನೊಂದಣಿ ಮಾಡಿಸಿದ ನಂತರ ಪಾವತಿ ಮಾಡಲಾಗುವುದು.

7) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಯು ತರಬೇತಿ ಮುಗಿಯುವವರೆವಿಗೂ ಅಂದರೆ 4 ವರ್ಷದವರೆವಿಗೂ ತರಬೇತಿಯನ್ನು ಬಿಡುವುದಿಲ್ಲವೆಂದು ಕರಾರು ಪತ್ರ ಬರೆದು ಕೊಡಬೇಕಾಗುವುದು. ಒಂದು ವೇಳೆ ಬಿಟ್ಟಲ್ಲಿ ಅಲ್ಲಿಯವರೆವಿಗೆ ಪಡೆದ ಶಿಷ್ಯವೇತನವನ್ನು

ಸರ್ಕಾರಕ್ಕೆ ವಾಪಸ್ಸು ಮಾಡಬೇಕಾಗುತ್ತದೆ. ಈ ಹಣವನ್ನು ಶೇ. 10ರಷ್ಟು ಬಡ್ಡಿ ಸೇರಿಸಿ ಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು. ಒಂದು ವೇಳೆ ರಾಜ್ಯ:ಕೇಂದ್ರ ಸರ್ಕಾರಿ ಕೆಲಸ ಸಿಕ್ಕಲ್ಲಿ ಮಾತ್ರ ನಿಯಮಗಳನ್ನು ಸಡಿಲಗೊಳಿಸಲಾಗುವುದು.

8) ಅಪೂರ್ಣವಾದ ಮತ್ತು ನಿಬಂಧನೆಗಳಿಗೆ ಒಳಪಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

9) ಅಭ್ಯರ್ಥಿಗಳು ಸುಳ್ಳು ಪ್ರಮಾಣ ಪತ್ರಗಳನ್ನು ಮತ್ತು ಮಾಹಿತಿಗಳನ್ನು ನೀಡಿದಲ್ಲಿ ಅಂತಹ ಅಭ್ಯರ್ಥಿಗಳನ್ನು ಕಾನೂನಿನ ಕ್ರಮಕ್ಕೆ ಒಳಪಡಿಸಲಾಗುವುದು.

ಮೇಲ್ಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸಬಹುದಾಗಿದೆ. ಅರ್ಜಿ ನಮೂನೆಗಳನ್ನು ಕಛೇರಿ ವೇಳೆಯಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಕೋಲಾರ ರವರಿಂದ ದಿನಾಂಕ: 08.07.2004ರಿಂದ 17.07.2004ರ ಒಳಗೆ ಪಡೆಯಬಹುದು. ಪೂರ್ಣ ವಿವರಗಳೊಂದಿಗೆ ಭರ್ತಿ ಮಾಡಿ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 24.07.2004 ಆಗಿರುತ್ತದೆ. ತಡವಾಗಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಗಳನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಕೋಲಾರ ರವರಿಗೆ ಕಳುಹಿಸಿಕೊಡುವುದು, ಹೆಚ್ಚಿನ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ
ಸಮಾಜ ಕಲ್ಯಾಣಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1014

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ವಿಷಯ :** ಚಂದ್ರಮೌಳೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘ (ನಿ) ಚಿಕ್ಕಬಳ್ಳಾಪುರ ಈ ಸಂಘದ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ: 277: 84-85, ದಿನಾಂಕ: 21.01.84.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ಪತ್ರದ ಸಂಖ್ಯೆ:ಸನಿ 46: ಸಮಾಪನೆ: ಸಿಆರ್.21:2003-04, ದಿನಾಂಕ: 23.03.2004.

**ಪೀಠಿಕೆ:**

ಚಂದ್ರಮೌಳೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘ (ನಿ) ಚಿಕ್ಕಬಳ್ಳಾಪುರ ಈ ಸಂಘವನ್ನು ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಋಣ ಸಮಾಪನೆಗೊಳಿಸಿ, ಮಾರಾಟಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಸಂಘದ ಸಮಾಪನಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರಿಗೆ ನೊಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕೆಳಕಂಡಂತೆ ಸಲ್ಲಿಸಿರುತ್ತಾರೆ.

1) ಸಮಾಪನಾಧಿಕಾರಿಗಳು ದಿನಾಂಕ: 20.03.2004ರಂದು ನೊಂದಣಿ ರದ್ದತಿ ಬಗ್ಗೆ ನಡವಳಿಕೆಗಳನ್ನು ತೆಗೆದುಕೊಂಡಿದ್ದು, ಈ ನಡವಳಿಕೆಗಳಲ್ಲಿ ಸಂಘದ ಯಾವುದೇ ಸಾಲಿನ ಆಡಿಟ್ ವರದಿಯಾಗಲೀ ಅಥವಾ ಸಂಘದ ಆಸ್ತಿ- ಜವಾಬ್ದಾರಿ ತಃಖ್ತೆಯಾಗಲೀ ಲಭ್ಯವಿಲ್ಲವೆಂದು ಹಾಗೂ ಈ ಬಗ್ಗೆ ಹಲವಾರು ಪ್ರಯತ್ನಗಳನ್ನು ಮಾಡಿದ್ದು ಸಫಲವಾಗಿಲ್ಲ.

2) ಸಮಾಪನೆಯಲ್ಲಿರುವ ಈ ಸಹಕಾರ ಸಂಘವು ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ (ನಿ) ಚಿಕ್ಕಬಳ್ಳಾಪುರ ಶಾಖೆ ಹಾಗೂ ಕೈಗಾರಿಕಾ ಇಲಾಖೆ, ಬೆಂಗಳೂರು ಇವರಿಗೆ ಪತ್ರಗಳನ್ನು ಬರೆದು ಲೇಣಿ ದೇಣಿಗಳ ಬಗ್ಗೆ ವಿವರಗಳನ್ನು ಸಂಘಕ್ಕೆ ಕಳುಹಿಸಿಕೊಡಲು ತಿಳಿಸಲಾಗಿದ್ದು ನಿಗದಿತ ಅವಧಿಯೊಳಗೆ ಯಾವುದೇ ಮಾಹಿತಿ ಬಂದಿರುವುದಿಲ್ಲ.

3) ಚಿಕ್ಕಬಳ್ಳಾಪುರ ಶಾಖೆಯ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ದಿನಾಂಕ: 15.12.2003ರ ಪತ್ರದ ಪ್ರಕಾರ ಬ್ಯಾಂಕಿಗೆ ಅಸಲು ಬಡ್ಡಿ ಮತ್ತು ಸುಸ್ತಿ ಬಡ್ಡಿ ಸೇರಿದಂತೆ ಒಟ್ಟು ರೂ. 10672-91 ಗಳು ಬಾಕಿ ಇರುವುದಾಗಿ ತಿಳಿಸಿರುತ್ತಾರೆ. ಹಾಗೂ ಬ್ಯಾಂಕಿನ ಚಾಲ್ತಿ ಖಾತೆಯಲ್ಲಿ ರೂ. 371-51 ಮತ್ತು ಷೇರು ಹಣ ರೂ. 500-00 ಗಳು ಇರುವುದಾಗಿ ತಿಳಿಸಿರುತ್ತಾರೆ. ಇದರೊಂದಿಗೆ ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಚಿಕ್ಕಬಳ್ಳಾಪುರ ಶಾಖೆಯಿಂದ ದೃಢೀಕರಣ ಪಡೆಯಲಾಗಿದ್ದು ಇವರ ಪ್ರಕಾರ ಯಾವುದೇ ಆಖೈರು ಶಿಲ್ಕು ಇರುವುದಿಲ್ಲವೆಂದು ತಿಳಿಸಿರುತ್ತಾರೆ ಹಾಗೂ ಮೇಲ್ಕಂಡ ವಿವರಗಳನ್ನು ಅನುಸರಿಸಿ ಸಂಘದ ಆಸ್ತಿ ರೂ. 871-55 ಹಾಗೂ ಜವಾಬ್ದಾರಿ ಹೊಣೆಗಾರಿಕೆ ರೂ. 2658-91 ಎಂದು ಸಮಾಪನಾಧಿಕಾರಿಗಳು ತೀರ್ಮಾನಿಸಿರುತ್ತಾರೆ.

4) ರಾಜ್ಯ ಕೈಗಾರಿಕಾ ಬ್ಯಾಂಕಿಗೆ ಸಾಲದ ಬಾಕಿ ಬಾಬತ್ತು ರೂ. 10672-91 ಇದನ್ನು ಪಾವತಿಸಲು ಸಂಘದಲ್ಲಿ ಯಾವುದೇ ರಹ ಇಲ್ಲವೆಂದು ತೀರ್ಮಾನಿಸಿದ್ದು ಈ ಸಾಲವನ್ನು ಮನ್ನಾ ಮಾಡುವಂತೆ ಕೋರಿ ರಾಜ್ಯ ಕೈಗಾರಿಕಾ ಬ್ಯಾಂಕ್ ಪದಾಧಿಕಾರಿಗಳನ್ನು ಪ್ರಾರ್ಥಿಸಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.

5) ದಿನಾಂಕ: 20.03.2004ರ ಅಂತ್ಯಕ್ಕೆ ಇದ್ದಂತೆ ಜಮಾ-ಖರ್ಚು ಲಾಭ- ನಷ್ಟದ ತಃಖ್ತೆ ಹಾಗೂ ಆಸ್ತಿ ಜವಾಬ್ದಾರಿಗಳ ಶೂನ್ಯ ತಃಖ್ತೆಯನ್ನು ಲಗತ್ತಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಈ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಅಭಿಪ್ರಾಯಪಟ್ಟು ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ:277:84-85, ದಿನಾಂಕ: 31ನೇ ಮಾರ್ಚ್, 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಚಂದ್ರಮೌಳೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘ (ನಿ) ಚಿಕ್ಕಬಳ್ಳಾಪುರ, ಈ ಸಂಘದ ನೊಂದಣಿ ಸಂಖ್ಯೆ: ಎಆರ್‌ಕೆ: 431:1952-53 ದಿನಾಂಕ: 01.08.1953ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 31.03.2004ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ.ಸಿ. ಸತೀಶ್**
ಪಿ.ಆರ್. 1015 ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ವಿಷಯ :** ಚಿಂತಾಮಣಿ ತಾಲ್ಲೂಕು ರೇಷ್ಮೆ ಕೈಗಾರಿಕಾ ಸಹಕಾರ ಸಂಘ ನಿ. ಕೋನಂಪಲ್ಲಿ ಈ ಸಂಘದ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ :ಸಿಆರ್:277: 84-85, ದಿನಾಂಕ:18.07.84, 30.06.2003.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ಪತ್ರದ ಸಂಖ್ಯೆ:ಸನಿ 48: ಸಮಾಪನೆ: ಸಿಆರ್.24:2003-04, ದಿನಾಂಕ: 23.03.2004.

**ಪೀಠಿಕೆ:**

ಚಿಂತಾಮಣಿ ತಾಲ್ಲೂಕು ರೇಷ್ಮೆ ಕೈಗಾರಿಕಾ ಸಹಕಾರ ಸಂಘ ನಿ., ಕೋನಂಪಲ್ಲಿ ಈ ಸಂಘವನ್ನು ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಋಣ ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರುಗಳು, ಚಿಂತಾಮಣಿ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿದ್ದು, ನಂತರ ಅವರ ಬದಲಿಗೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಚಿಂತಾಮಣಿ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರಿಗೆ ನೊಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕೆಳಕಂಡಂತೆ ಸಲ್ಲಿಸಿರುತ್ತಾರೆ.

1) ಸಮಾಪನೆಯಲ್ಲಿರುವ ಈ ಸಹಕಾರ ಸಂಘದ ಲಭ್ಯವಿರುವ 92-93ನೇ ಸಾಲಿನ ಅಂದರೆ ದಿನಾಂಕ: 31.03.93ರ ಅಂತ್ಯಕ್ಕೆ ಇರುವಂತೆ ಆಸ್ತಿ-ಜವಾಬ್ದಾರಿ ತಃಖ್ತೆಯ ಪೈಕಿ ಆಸ್ತಿ-ಬಾಬ್ತುಗಳ ವಸೂಲಾತಿಗೆ ಯಾವುದೇ ರಹಾ ಇಲ್ಲದೇ ಇರುವ ಕಾರಣ ಈ ಬಾಬ್ತುಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿ ಇದನ್ನು ಜವಾಬ್ದಾರಿ ಖಾತೆಗೆ ಸರಿದೂಗಿಸಿ ಲಾಭ ನಷ್ಟ ಹಾಗೂ ಆಸ್ತಿ-ಜವಾಬ್ದಾರಿ ತಃಖ್ತೆಗಳನ್ನು ಶೂನ್ಯಗೊಳಿಸಿ ದಿನಾಂಕ: 09.03.2004ರ ನಡವಳಿಕೆಗಳ ಪ್ರತಿಯನ್ನು ಪತ್ರದೊಂದಿಗೆ ಲಗತ್ತಿಸಿರುತ್ತಾರೆ ಹಾಗೂ ಇದರೊಂದಿಗೆ ಅಂತಿಮ ಜಮಾ-ಖರ್ಚು ಹಾಗೂ ಆಸ್ತಿ-ಜವಾಬ್ದಾರಿ ತಃಖ್ತೆಗಳನ್ನು ಸಲ್ಲಿಸಿರುತ್ತಾರೆ.

2) ಸಮಾಪನೆಯಲ್ಲಿ ಈ ಸಹಕಾರ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಉಪಯೋಗವಿಲ್ಲವೆಂದು ತಿಳಿಸಿರುತ್ತಾರೆ.

3) ಸಮಾಪನಾಧಿಕಾರಿಗಳು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಚಿಂತಾಮಣಿ ಶಾಖೆಗಳಿಗೂ ಹಾಗೂ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ಚಿಂತಾಮಣಿ ಈ ಬ್ಯಾಂಕುಗಳೊಂದಿಗೆ ನಡೆಸಿರುವ ಪತ್ರ ವ್ಯವಹಾರದ ಪ್ರತಿಗಳನ್ನು ಪ್ರಸ್ತಾವನೆಯೊಂದಿಗೆ ಸಲ್ಲಿಸಿರುತ್ತಾರೆ.

ಮೇಲ್ಕಂಡಂತೆ ವರದಿಯನ್ನು ಸಲ್ಲಿಸಿ, ಸಂಘದ ನೊಂದಣಿಯನ್ನು ರದ್ದುಪಡಿಸಬೇಕೆಂದು ಕೋರಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ:ಸಿಆರ್.277:84-85, ದಿನಾಂಕ: 31ನೇ ಮಾರ್ಚ್, 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಚಿಂತಾಮಣಿ ತಾಲ್ಲೂಕು ರೇಷ್ಮೆ ಕೈಗಾರಿಕಾ ಸಹಕಾರ ಸಂಘ (ನಿ) ಕೋನಂಪಲ್ಲಿ, ಈ ಸಂಘದ ನೊಂದಣಿ ಸಂಖ್ಯೆ: ಎಆರ್‌ಕೆ:ಆರ್‌ಇಬಿಎನ್:ಐಎಸ್‌ಡಿಎಲ್: 77-78 ದಿನಾಂಕ: 29.01.1957ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 31.03.2004ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1016

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ವಿಷಯ :** ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಅಮ್ಮೇರಹಳ್ಳಿ, ಕೋಲಾರ ತಾಲ್ಲೂಕು ಇದರ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.30:2001-02, ದಿನಾಂಕ:30.04.2001 ಮತ್ತು 13.03.2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ರವರ ಪತ್ರದ ಸಂಖ್ಯೆ:ಎಆರ್‌ಕೆ:ಎಲ್‌ಕ್ಯೂಡಿ:ಸಿಆರ್.24:99-2000, ದಿನಾಂಕ: 20.05.2004.

**ಪೀಠಿಕೆ:**

ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಅಮ್ಮೇರಹಳ್ಳಿ, ಕೋಲಾರ ತಾಲ್ಲೂಕು ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು (ಮಾರಾಟ ಶಾಖೆ) ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ನೇಮಕ ಮಾಡಿ ನಂತರ ಇವರ ಬದಲಿಗೆ ಶ್ರೀ ವಿ. ಶಿವಕುಮಾರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಂಘದ ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ಸಂಘದ ನೊಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದಾಗ ಸಂಘದ ಸಮಾಪನಾಧಿಕಾರಿಗಳು ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಿರುವುದು ಕಂಡುಬರುತ್ತದೆ.

ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಶಾಖೆ ಇದರ ಅಮಾನತ್ತು ಖಾತೆಯಲ್ಲಿರುವ 5000-00 ರೂಗಳನ್ನು ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಹೆಸರಿನಲ್ಲಿ ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಶಾಖೆ ಇಲ್ಲಿ ತೆರೆದಿರುವ ಪಿ.ಡಿ. ಖಾತೆಯ ಸಂಖ್ಯೆ: 17661 ಕ್ಕೆ ವರ್ಗಾಯಿಸುವ ಬಗ್ಗೆ ಕ್ರಮ ಕೈಗೊಂಡಿರುತ್ತಾರೆ. ಹಾಗೂ ಈ ಬಗ್ಗೆ ದಿನಾಂಕ: 15.03.2004ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಮೇಲಿನಂತೆ ತೀರ್ಮಾನ ಕೈಗೊಂಡಿರುತ್ತಾರೆ ಮತ್ತು ಸಂಘದ ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ ಎಂಬುದಾಗಿ ಸದರಿಯವರು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ತಿಳಿದುಬರುತ್ತದೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲ ಎಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಮತ್ತು ಸಂಘದ ಸಮಾಪನಾಧಿಕಾರಿಗಳು ವರದಿ ಸಲ್ಲಿಸಿರುವುದರಿಂದ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.25:2001-02, ದಿನಾಂಕ: 25ನೇ ಮೇ, 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಅಮ್ಮೇರಹಳ್ಳಿ, ಕೋಲಾರ ತಾಲ್ಲೂಕು ಈ ಸಂಘದ ನೊಂದಣಿ ಸಂಖ್ಯೆ: 253:25680:98-99 ದಿನಾಂಕ:20.02.1999 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ. ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 25.05.2004ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1017

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ನಂ. ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.31:2001-02, ದಿನಾಂಕ: 24ನೇ ಫೆಬ್ರವರಿ, 2004**

**ವಿಷಯ :** ಬಂಗಾರಪೇಟೆ ತಾಲ್ಲೂಕು ಬೀರನಕೊಪ್ಪ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಈ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.31:2001-02, ದಿನಾಂಕ:30.05.2001.
2. ಈ ಕಛೇರಿಯ ಆದೇಶದ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:19:2002-03 ದಿನಾಂಕ: 13.03.2003.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ರವರ ಪತ್ರದ ಸಂಖ್ಯೆ:ಎಆರ್‌ಕೆ:ಎಲ್‌ಕ್ಯೂಡಿ:ಸಿಆರ್.17:2001-02, ದಿನಾಂಕ: 16.02.2004.

**ಪ್ರಸ್ತಾವನೆ:**

ಬಂಗಾರಪೇಟೆ ತಾಲ್ಲೂಕು ಬೀರನಕೊಪ್ಪ ಹಾಲು ಉತ್ಪಾದಕರ ಸಹಕಾರ ಸಂಘ(ನಿ) ಇದು ತನ್ನ ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ (ಉಲ್ಲೇಖ 1) ನೇಮಿಸಿ ನಂತರ ಅವರ ಬದಲಿಗೆ ಶ್ರೀ ಎಂ. ಗಂಗಪ್ಪ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ನೇಮಕ ಮಾಡಿ ಉಲ್ಲೇಖ (2)ರಲ್ಲಿ ಆದೇಶವನ್ನು ಹೊರಡಿಸಲಾಗಿತ್ತು.

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಈ ಕೆಳಕಂಡಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಬಂಗಾರಪೇಟೆ ತಾಲ್ಲೂಕು ಬೀರನಕೊಪ್ಪ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಇದರ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಅರ್ಜಿ ಸಲ್ಲಿಸಿದ್ದು ನಂತರ ಸಮಾಪನಾಧಿಕಾರಿಗಳು ದಿನಾಂಕ: 16.02.2004ರಂದು ಠರಾವು ಮಾಡಿ ಗ್ರಾಮದಲ್ಲಿ ಹಾಲು ಉತ್ಪಾದನೆಯಾಗುತ್ತಿದ್ದು ಗ್ರಾಮಸ್ಥರು ಮತ್ತು ಸಂಘದ ಸದಸ್ಯರು ಖಾಸಗಿ ಡೈರಿಗಳಿಗೆ ಹಾಲು ಸರಬರಾಜು ಮಾಡುತ್ತಿದ್ದು, ಇದರಿಂದ ಸದಸ್ಯರಿಗೆ ತೊಂದರೆಯಾಗುತ್ತಿದ್ದು, ಸಮಾಪನೆಯಲ್ಲಿರುವ ಸಂಘವನ್ನು ಪುನಃಶ್ಚೇತನಗೊಳಿಸಿ ಸಂಘದ ಸದಸ್ಯರಿಗೆ ಅನುಕೂಲ ಮಾಡಿಕೊಡಬೇಕೆಂದು ಕೋರಿರುತ್ತಾರೆ ಎಂಬುದಾಗಿ ತಿಳಿಸಿ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ಕೋರಿರುತ್ತಾರೆ.

ಋಣ ಸಮಾಪನೆಯಲ್ಲಿರುವ ಬೀರನಕೊಪ್ಪ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಬಂಗಾರಪೇಟೆ ತಾಲ್ಲೂಕು, ಈ ಸಂಘವನ್ನು ಪುನಃಶ್ಚೇತನಗೊಳಿಸುವುದರಿಂದ ಸದಸ್ಯರಿಗೆ ಮತ್ತು ಗ್ರಾಮಸ್ಥರಿಗೆ ಪ್ರಯೋಜನ ಇದ್ದು ಪುನಃಶ್ಚೇತನಗೊಳಿಸಬೇಕೆಂದು ಸಂಘದ ಸಮಾಪನಾಧಿಕಾರಿಗಳು ಮತ್ತು ಸದಸ್ಯರು ಕೋರಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಬೀರನಕೊಪ್ಪ ಹಾಲು ಉತ್ಪಾದಕರ ಸಹಕಾರ ಸಂಘ (ನಿ), ಬಂಗಾರಪೇಟೆ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಗಳನ್ನು ನೇಮಕ ಮಾಡಿರುವ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಃಶ್ಚೇತನಗೊಳಿಸಲಾಗಿದೆ ಎಂಬ ಆದೇಶವನ್ನು ಹಾಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಿದೆ.

**ಷರತ್ತುಗಳು:**

1) ಸಂಘವು ಈ ಆದೇಶ ಹೊರಡಿಸಿದ 2 ತಿಂಗಳೊಳಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, ನಿಯಮ ಮತ್ತು ಸಂಘದ ಉಪನಿಯಮಗಳಲ್ಲಿ ಹೇಳಿರುವ ಪ್ರಕಾರ ಸರ್ವಸದಸ್ಯರ ಸಭೆ ನಡೆಸಲು ಹಾಗೂ ಆಡಳಿತ ಮಂಡಳಿಯನ್ನು ರಚಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು.

2) ಸಂಘದ ಆಸ್ತಿ-ಜವಾಬ್ದಾರಿಗಳನ್ನು ಹಾಲಿ ಇದ್ದಂತೆ ಚಾಲ್ತಿ ಲೆಕ್ಕಗಳನ್ನು ಮುಂದುವರೆಸಿಕೊಂಡು ಹೋಗುವುದು.

3) ಸಮಾಪನಾಧಿಕಾರಿಗಳು ತಮ್ಮ ಅವಧಿಯಲ್ಲಿ ವ್ಯವಹಾರಗಳನ್ನು ಮಾಡಿದ್ದಲ್ಲಿ ಲೆಕ್ಕಗಳನ್ನು ಅಳವಡಿಸಿಕೊಂಡು ಕಲಂ 63ರ ರೀತ್ಯಾ ಲೆಕ್ಕಪರಿಶೋಧನೆಗೆ ಒಳಪಡಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 24.02.2004ರಂದು ಹೊರಡಿಸಿದೆ.

**ಬಿ.ಸಿ. ಸತೀಶ್**

ಪಿ.ಆರ್. 1018

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ವಿಷಯ :** ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕೋಗಿಲಹಳ್ಳಿ, ಕೋಲಾರ ತಾಲ್ಲೂಕು ಇದರ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.30:2001-02, ದಿನಾಂಕ:30.04.2001 ಮತ್ತು 13.03.2003.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ರವರ ಪತ್ರದ ಸಂಖ್ಯೆ:ಎಆರ್‌ಕೆ:ಎಲ್‌ಕ್ಯೂಡಿ:ಸಿಆರ್.24:99-2000, ದಿನಾಂಕ: 20.05.2004.

**ಪೀಠಿಕೆ:**

ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕೋಗಿಲಹಳ್ಳಿ, ಕೋಲಾರ ತಾಲ್ಲೂಕು ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು (ಮಾರಾಟ ಶಾಖೆ) ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ನೇಮಕ ಮಾಡಿ ನಂತರ ಇವರ ಬದಲಿಗೆ ಶ್ರೀ ವಿ. ಶಿವಕುಮಾರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಂಘದ ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ಸಂಘದ ನೊಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದಾಗ ಸಂಘದ ಸಮಾಪನಾಧಿಕಾರಿಗಳು ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಿರುವುದು ಕಂಡುಬರುತ್ತದೆ.

ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಶಾಖೆ ಇದರ ಅಮಾನತ್ತು ಖಾತೆಯಲ್ಲಿರುವ 5000-00 ರೂಗಳನ್ನು ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಹೆಸರಿನಲ್ಲಿ ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಶಾಖೆ ಇಲ್ಲಿ ತೆರೆದಿರುವ ಪಿ.ಡಿ. ಖಾತೆಯ ಸಂಖ್ಯೆ: 17661 ಕ್ಕೆ ವರ್ಗಾಯಿಸುವ ಬಗ್ಗೆ ಕ್ರಮ ಕೈಗೊಂಡಿರುತ್ತಾರೆ. ಹಾಗೂ ಈ ಬಗ್ಗೆ ದಿನಾಂಕ: 15.03.2004ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಮೇಲಿನಂತೆ ತೀರ್ಮಾನ ಕೈಗೊಂಡಿರುತ್ತಾರೆ ಮತ್ತು ಸಂಘದ ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ ಎಂಬುದಾಗಿ ಸದರಿಯವರು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ತಿಳಿದುಬರುತ್ತದೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲ ಎಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಮತ್ತು ಸಂಘದ ಸಮಾಪನಾಧಿಕಾರಿಗಳು ವರದಿ ಸಲ್ಲಿಸಿರುವುದರಿಂದ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.25:2001-02, ದಿನಾಂಕ: 24ನೇ ಮೇ, 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕೋಗಿಲಹಳ್ಳಿ, ಕೋಲಾರ ತಾಲ್ಲೂಕು ಈ ಸಂಘದ ನೊಂದಣಿ ಸಂಖ್ಯೆ: 254:25681:98-99 ದಿನಾಂಕ:20.02.1999 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ. ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.05.2004ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1019

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ವಿಷಯ :** ಗೌರಿಬಿದನೂರು ತಾಲ್ಲೂಕು ಅಣಗಟ್ಟನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಇದರ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:132:2001-02, ದಿನಾಂಕ:18.02.2002.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ಪತ್ರದ ಸಂಖ್ಯೆ:ಸನಿ.48:ಸಮಾಪನೆ:ಸಿಆರ್1:2004-05, ದಿನಾಂಕ: 28.04.2004.

**ಪೀಠಿಕೆ:**

ಗೌರಿಬಿದನೂರು ತಾಲ್ಲೂಕು ಅಣಗಟ್ಟನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಅಣಗಟ್ಟನಹಳ್ಳಿ, ಈ ಸಂಘವು ಕಾರ್ಯ ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಗೌರಿಬಿದನೂರು ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ವರದಿ ಸಲ್ಲಿಸಿ ಈ ಸಹಕಾರ ಸಂಘದ ಪುನಃಶ್ಚೇತನಕ್ಕೆ ಯಾವುದೇ ರಹಾ ಇಲ್ಲದೇ ಇದ್ದು ಇದನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನವಿಲ್ಲದ ಕಾರಣ ಈ ಸಂಘದ ನೊಂದಣಿಯನ್ನು ರದ್ದುಪಡಿಸಬೇಕೆಂದು ಕೋರಿರುತ್ತಾರೆ.

ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ) ಗೌರಿಬಿದನೂರು ಶಾಖೆ ಇದರ ಉಳಿತಾಯ ಖಾತೆಯಲ್ಲಿರುವ ಸಂಘದ ಹಣ ರೂ. 100ಗಳನ್ನು ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ರವರ ಕೋಲಾರ ಶಾಖೆಯ ಪಿ.ಡಿ. ಖಾತೆಗೆ ವರ್ಗಾಯಿಸುವ ಬಗ್ಗೆ ಸಮಾಪನಾಧಿಕಾರಿಗಳು ಕ್ರಮ ಕೈಗೊಂಡು, ಜಮಾ ಖರ್ಚು ನಡೆಸಿ ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:132:2001-02, ದಿನಾಂಕ: 24ನೇ ಮೇ, 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಗೌರಿಬಿದನೂರು ತಾಲ್ಲೂಕು ಅಣಗಟ್ಟನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಈ ಸಂಘದ ನೊಂದಣಿ ಸಂಖ್ಯೆ:ಎಆರ್48:ಎಓಜಿ: 306: 21307:95-96 ದಿನಾಂಕ:04.05.1996ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ. ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.05.2004ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1020

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ವಿಷಯ :** ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕುರುಬರಪೇಟೆ, ಕೋಲಾರ ಇದರ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.25:2001-02, ದಿನಾಂಕ:30.04.2001 ಮತ್ತು 13.03.2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ರವರ ಪತ್ರದ ಸಂಖ್ಯೆ:ಎಆರ್‌ಕೆ:ಎಲ್‌ಕ್ಯೂಡಿ:ಸಿಆರ್.24:99-2000, ದಿನಾಂಕ: 20.05.2004.

**ಪೀಠಿಕೆ:**

ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕುರುಬರಪೇಟೆ, ಕೋಲಾರ ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು (ಮಾರಾಟ ಶಾಖೆ) ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ನೇಮಕ ಮಾಡಿ ನಂತರ ಇವರ ಬದಲಿಗೆ ಶ್ರೀ ವಿ. ಶಿವಕುಮಾರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಂಘದ ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ಸಂಘದ ನೊಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದಾಗ ಸಂಘದ ಸಮಾಪನಾಧಿಕಾರಿಗಳು ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಿರುವುದು ಕಂಡುಬರುತ್ತದೆ.

ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಶಾಖೆ ಇದರ ಅಮಾನತ್ತು ಖಾತೆಯಲ್ಲಿರುವ 1000-00 ರೂಗಳನ್ನು ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಹೆಸರಿನಲ್ಲಿ ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಶಾಖೆ ಇಲ್ಲಿ ತೆರೆದಿರುವ ಪಿ.ಡಿ. ಖಾತೆಯ ಸಂಖ್ಯೆ: 17661 ಕ್ಕೆ ವರ್ಗಾಯಿಸುವ ಬಗ್ಗೆ ಕ್ರಮ ಕೈಗೊಂಡಿರುತ್ತಾರೆ. ಹಾಗೂ ಈ ಬಗ್ಗೆ ದಿನಾಂಕ: 15.03.2004ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಮೇಲಿನಂತೆ ತೀರ್ಮಾನ ಕೈಗೊಂಡಿರುತ್ತಾರೆ ಮತ್ತು ಸಂಘದ ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ ಎಂಬುದಾಗಿ ಸದರಿಯವರು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ತಿಳಿದುಬರುತ್ತದೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲ ಎಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಮತ್ತು ಸಂಘದ ಸಮಾಪನಾಧಿಕಾರಿಗಳು ವರದಿ ಸಲ್ಲಿಸಿರುವುದರಿಂದ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.25:2001-02, ದಿನಾಂಕ: 24ನೇ ಮೇ, 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕುರುಬರಪೇಟೆ, ಕೋಲಾರ ಈ ಸಂಘದ ನೊಂದಣಿ ಸಂಖ್ಯೆ: 252:25679:98-99 ದಿನಾಂಕ:20.09.1999 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ. ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.05.2004ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1021

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ವಿಷಯ :** ಬಾಗೇಪಲ್ಲಿ ತಾಲ್ಲೂಕು ಡಿ.ಕೊತ್ತಪಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಇದರ ನೊಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.08:99-2000, ದಿನಾಂಕ:10.09.99 ಮತ್ತು 30.06.2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ಪತ್ರದ ಸಂಖ್ಯೆ:ಸನಿ:48:ಸಮಾಪನೆ:ಸಿಆರ್20:2003-2004, ದಿನಾಂಕ: 23.03.2004.

**ಪೀಠಿಕೆ:**

ಬಾಗೇಪಲ್ಲಿ ತಾಲ್ಲೂಕು ಡಿ.ಕೊತ್ತಪಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಈ ಸಂಘವು ಕಾರ್ಯ ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಬಾಗೇಪಲ್ಲಿ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ನಂತರ ಇವರ ಬದಲಿಗೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಬಾಗೇಪಲ್ಲಿ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರಿಗೆ ಸಂಘದ ನೊಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಹಾಗೂ ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ ಎಂದು ವರದಿ ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:08:99-2000, ದಿನಾಂಕ: 31ನೇ ಮಾರ್ಚ್, 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಡಿ ಕೊತ್ತಪಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬಾಗೇಪಲ್ಲಿ ತಾಲ್ಲೂಕು ಈ ಸಂಘದ ನೊಂದಣಿ ಸಂಖ್ಯೆ:ಎಆರ್‌48:ಆರ್‌ಸಿಎಸ್:ಸಂಖ್ಯೆ:1328:1986-87 ದಿನಾಂಕ:06.07.1988 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ. ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 31.03.2004ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1022

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ನಂ. ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.57:2001-02, ದಿನಾಂಕ: 24ನೇ ಜನವರಿ, 2004**

**ವಿಷಯ :** ಬಂಗಾರಪೇಟೆ ತಾಲ್ಲೂಕು ದೊಡ್ಡಕಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಈ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:57:2001-2002, ದಿನಾಂಕ:30.06.2000.
2. ಈ ಕಛೇರಿಯ ಆದೇಶದ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್:19:2002-03 ದಿನಾಂಕ:13.03.2003.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ರವರ ಪತ್ರದ ಸಂಖ್ಯೆ:ಸನಿ.49:ಎಲ್‌ಕ್ಯೂಡಿ:ಸಿಆರ್.33:2001-02, ದಿನಾಂಕ: 16.01.2004.

**ಪ್ರಸ್ತಾವನೆ:**

ಬಂಗಾರಪೇಟೆ ತಾಲ್ಲೂಕು ದೊಡ್ಡಕಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ(ನಿ) ಇದು ತನ್ನ ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಉಲ್ಲೇಖ (1)ರಲ್ಲಿ ಆದೇಶವನ್ನು ಹೊರಡಿಸಲಾಗಿತ್ತು. ನಂತರ ಇವರ ಬದಲಿಗೆ ಶ್ರೀ ಎಂ. ಗಂಗಪ್ಪ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ. ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು (ಉಲ್ಲೇಖ 2)

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಈ ಕೆಳಕಂಡಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಬಂಗಾರಪೇಟೆ ತಾಲ್ಲೂಕು ದೊಡ್ಡಕಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಇದರ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಕ್ರಮ ಕೈಗೊಳ್ಳಬೇಕೆಂದು ಅರ್ಜಿ ಸಲ್ಲಿಸಿದ್ದು ನಂತರ ಸಮಾಪನಾಧಿಕಾರಿಗಳು ದಿನಾಂಕ: 30.12.2003ರಂದು ಠರಾವು ಮಾಡಿ ಸದರಿ ಅರ್ಜಿಯನ್ನು ಪರಿಶೀಲಿಸಿ, ಸದರಿ ಗ್ರಾಮದಲ್ಲಿ ಸುಮಾರು 200 ರಿಂದ 250 ಲೀಟರ್ ಹಾಲು ಉತ್ಪಾದನೆಯಾಗುತ್ತಿರುವುದರಿಂದ ಖಾಸಗಿ ಡೈರಿಗಳಿಗೆ ಹಾಲು ಸರಬರಾಜು ಮಾಡಲಾಗುತ್ತಿದ್ದು ಇದರಿಂದ ಸದಸ್ಯರಿಗೆ ತೊಂದರೆಯಾಗುತ್ತಿದ್ದು, ಸಮಾಪನೆಯಲ್ಲಿರುವ ಸಂಘವನ್ನು ಪುನಃಶ್ಚೇತನಗೊಳಿಸಿ ಸಂಘದ ಸದಸ್ಯರಿಗೆ ಅನುಕೂಲ ಮಾಡಿಕೊಡಬೇಕೆಂದು ಕೋರಿರುತ್ತಾರೆ ಎಂಬುದಾಗಿ ತಿಳಿಸಿ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ಕೋರಿರುತ್ತಾರೆ.

ಋಣ ಸಮಾಪನೆಯಲ್ಲಿರುವ ದೊಡ್ಡಕಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಬಂಗಾರಪೇಟೆ ತಾಲ್ಲೂಕು, ಈ ಸಂಘವನ್ನು ಪುನಃಶ್ಚೇತನಗೊಳಿಸುವುದರಿಂದ ಸದಸ್ಯರಿಗೆ ಮತ್ತು ಗ್ರಾಮಸ್ಥರಿಗೆ ಪ್ರಯೋಜನ ಇದ್ದು ಪುನಃಶ್ಚೇತನಗೊಳಿಸಬೇಕೆಂದು ಸಂಘದ

ಸಮಾಪನಾಧಿಕಾರಿಗಳು ಮತ್ತು ಸದಸ್ಯರು ಕೋರಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69:ಸಿಎಲ್ಎಂ:2001 ದಿನಾಂಕ: 21.11.2001ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ದೊಡ್ಡಕಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ), ಬಂಗಾರಪೇಟೆ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಗಳನ್ನು ನೇಮಕ ಮಾಡಿರುವ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಃಶ್ಚೇತನಗೊಳಿಸಲಾಗಿದೆ ಎಂಬ ಆದೇಶವನ್ನು ಹೊರಡಿಸಿರುತ್ತೇನೆ. ಹಾಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಿದೆ.

**ಷರತ್ತುಗಳು:**

1) ಸಂಘವು ಈ ಆದೇಶ ಹೊರಡಿಸಿದ 2 ತಿಂಗಳೊಳಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, ನಿಯಮ ಮತ್ತು ಸಂಘದ ಉಪನಿಯಮಗಳಲ್ಲಿ ಹೇಳಿರುವ ಪ್ರಕಾರ ಸರ್ವಸದಸ್ಯರ ಸಭೆ ನಡೆಸಲು ಹಾಗೂ ಆಡಳಿತ ಮಂಡಳಿಯನ್ನು ರಚಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು.

2) ಸಂಘದ ಆಸ್ತಿ-ಜವಾಬ್ದಾರಿಗಳನ್ನು ಹಾಲಿ ಇದ್ದಂತೆ ಚಾಲ್ತಿ ಲೆಕ್ಕಗಳನ್ನು ಮುಂದುವರೆಸಿಕೊಂಡು ಹೋಗುವುದು.

3) ಸಮಾಪನಾಧಿಕಾರಿಗಳು ತಮ್ಮ ಅವಧಿಯಲ್ಲಿ ವ್ಯವಹಾರಗಳನ್ನು ಮಾಡಿದ್ದಲ್ಲಿ ಲೆಕ್ಕಗಳನ್ನು ಅಳವಡಿಸಿಕೊಂಡು ಕಲಂ 63ರ ರೀತ್ಯಾ ಲೆಕ್ಕಪರಿಶೋಧನೆಗೆ ಒಳಪಡಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 24.01.2004ರಂದು ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1023

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ**

**ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ**

**ಸಂಖ್ಯೆ: ಎಪಿಒಸಿ-ಸಿಒಎನ್-ಸಿಆರ್ 8:04-05, ದಿನಾಂಕ: 5ನೇ ಜುಲೈ, 2004**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಚನ್ನಗಿರಿ ವಲಯದ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಚಾಸೀಸ್ ಸಂಖ್ಯೆ |
|---|---|---|---|---|
| 1. | ಸುಜುಕಿ ಮೋಟರ್ ಸೈಕಲ್ ಕೆಎ-14-ಜೆ-3238 | 36/04-05 ದಿನಾಂಕ: 09.06.2004 | 161011749503 | 1610-ಎಫ್ 7042-65 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯ ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 1024

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಿ.ಟಿ.ಸಿ.ಆರ್. ಸಂಖ್ಯೆ: 763/2002-03, ದಿನಾಂಕ: 6ನೇ ಜುಲೈ, 2004**

**ಮೂಡಿಗೆರೆ ಪೊ.ಠಾ. ಕ್ರೈಂ ಸಂ.8/2003 ದಿನಾಂಕ: 21ನೇ ಜನವರಿ, 2003**

**ಅಬಕಾರಿ ಉಪ ನಿರೀಕ್ಷಕರು, ಮೂಡಿಗೆರೆ ಉಪ ವಲಯ ಇವರ ಪ್ರ ವ ವ ಸಂಖ್ಯೆ: 29/2002-03, ದಿನಾಂಕ: 21ನೇ ಜನವರಿ, 2003**

**ಉಪಸ್ಥಿತರು**

ಶ್ರೀ ಕೆ. ಭೀಮಪ್ಪ ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ),
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಫಿರ್ಯಾದುದಾರರು:** | **ವಿರುದ್ಧ** | **ಆಪಾದಿತರು** |
|---|---|---|
| 1. ಆರಕ್ಷಕ ಉಪ ನಿರೀಕ್ಷಕರು, ಮೂಡಿಗೆರೆ ಪೊ.ಠಾಣೆ. | | 1. ಆರೋಪಿ ಪತ್ತೆಯಾಗಿರುವುದಿಲ್ಲ. ತಲೆ ಮರೆಸಿಕೊಂಡು ಓಡಿ ಹೋಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 21.01.2003ರಂದು ಆರಕ್ಷಕ ಉಪ ನಿರೀಕ್ಷಕರು, ಮೂಡಿಗೆರೆ ಪೊಲೀಸ್ ಠಾಣೆ, ಇವರು ಮೂಡಿಗೆರೆ ತಾಲ್ಲೂಕು, ಮೂಡಿಗೆರೆ ಹ್ಯಾಂಡ್ ಪೋಸ್ಟ್ ಹತ್ತಿರದ ಚೋಳಿಕೆರೆ ಎಸ್ಟೇಟ್ ಹತ್ತಿರ ಕೆ.ಎಂ. ರಸ್ತೆಯ ಒಂದು ಟೆಲಿಫೋನ್ ಕಂಬದ ಹತ್ತಿರ, ವಾಹನ ಸಂಖ್ಯೆ: ಸಿ.ಎ.ಡಬ್ಲ್ಯೂ. 3928 (ಲೈ ಲ್ಯಾಂಡ್ ಲಾರಿ) ಅನ್ನು ಅನುಮಾನಗೊಂಡು ತಡೆದು ನಿಲ್ಲಿಸಿದಾಗ ಆರೋಪಿಗಳು ವಾಹನವನ್ನು ಸ್ಥಳದಲ್ಲಿಯೇ ಬಿಟ್ಟು ಪತ್ತೆಯಾಗದೆ ತಲೆ ಮರೆಸಿಕೊಂಡು ಓಡಿ ಹೋಗಿರುತ್ತಾರೆ. ನಂತರ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 1954.800 ಲೀಟರ್ ಬ್ಯಾಗ್ ಪೈಪರ್ ಮತ್ತು 8 ಪಿಎಂ ವಿಸ್ಕಿ ತೆರಿಗೆ ರಹಿತ ಭಾರತೀಯ ಮದ್ಯವಿದ್ದು, ಸದರಿ ಮದ್ಯಕ್ಕೆ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿ ಯಾರೂ ಇರುವುದಿಲ್ಲ. ವಾಹನದೊಳಗೆ ಸಂಬಂಧಪಟ್ಟ ದಾಖಲಾತಿಗಳು ಲಭ್ಯವಿಲ್ಲದೆ ಇರುವುದರಿಂದ, ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಭಾರತೀಯ ತೆರಿಗೆ ರಹಿತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಠಾಣೆಯ ಕ್ರೈಂ ಸಂಖ್ಯೆ: 8/2003ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಮೂಡಿಗೆರೆ ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. 29/2002-03, ದಿನಾಂಕ: 21.01.2003ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶೀಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಜಿಲ್ಲೆ, ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲಿಕರಾದ ಶ್ರೀ ಸಗೀರ್ ಅಹಮದ್ ಬಿನ್ ಅಬ್ದುಲ್ ಬಷೀರ್, ನಂ. 2, 7ನೇ ಕ್ರಾಸ್, ಕೆ.ಆರ್. ಮೊಹಲ್ಲ, ಸಿದ್ದಪ್ಪ ಜಗದಿ ರಸ್ತೆ, ಮೈಸೂರು, ಇವರು ವಾಹನದ ಮಾಲಿಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು, ಇವರು ವಾಹನಕ್ಕೆ ರೂ. 1,23,150/- (ಒಂದು ಲಕ್ಷದ ಇಪ್ಪತ್ತಮೂರು ಸಾವಿರದ ಒಂದು ನೂರ ಐವತ್ತು ರೂಪಾಯಿಗಳು ಮಾತ್ರ)ಗಳ ಬೆಲೆಯನ್ನು ನಿಗದಿಪಡಿಸಿ ವರದಿಯನ್ನು ನೀಡಿರುತ್ತಾರೆ.

ವಾಹನದ ಮಾಲಿಕರಾದ ಶ್ರೀ ಸಗೀರ್ ಅಹಮದ್ ಬಿನ್ ಅಬ್ದುಲ್ ಬಷೀರ್, ನಂ.2, 7ನೇ ಕ್ರಾಸ್, ಕೆ.ಆರ್. ಮೊಹಲ್ಲ, ಸಿದ್ದಪ್ಪ ಜಗದಿ ರಸ್ತೆ, ಮೈಸೂರು, ಇವರು ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿದ್ದು, ದಿನಾಂಕ: 7/01/2004ರಂದು "ನೋ ಸಚ್ ಅಡ್ರೆಸ್ ಹೆನ್ಸ್ ರಿಟರ್ನ್ಡ್‌ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ದಿನಾಂಕ: 09.01.2004ರಂದು ಬೆಂಗಳೂರು ಆವೃತ್ತಿ ಮತ್ತು ದಿನಾಂಕ: 10.04.2004ರಂದು ಮೈಸೂರು ಆವೃತ್ತಿ ವಿಜಯ ಕರ್ನಾಟಕ ದಿನ ಪತ್ರಿಕೆಗಳಲ್ಲಿ ವಾಹನಕ್ಕೆ ಸಂಬಂಧಿಸಿದ 30 ದಿನಗಳೊಳಗಾಗಿ ವಾಹನದ ಮೇಲೆ ಹಕ್ಕು ಸಾಧಿಸಲು ಸಂಬಂಧಪಟ್ಟ ಅಧಿಕೃತ ದಾಖಲಾತಿಯೊಂದಿಗೆ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಲು ಅಂತಿಮ ಕಾಲಾವಕಾಶ ನೀಡಲಾಗಿದೆ. ಸದರಿ ಅವಧಿಯೊಳಗೆ ಯಾವುದೇ ಮನವಿ ಬಾರದೇ ಇದ್ದಲ್ಲಿ ಏಕ ಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. 30 ದಿನಗಳು ಕಳೆದರೂ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರೂ ಹಾಜರಿರುವುದಿಲ್ಲ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 1954.800 ಲೀ. ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 1953.870 ಲೀಟರ್ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಒಂದು ವರ್ಷ, ಮೂರು ತಿಂಗಳಿಗೂ ಮೇಲ್ಪಟ್ಟಿದ್ದು, ವಾಹನದ ಮಾಲಿಕರು, ಈವರೆವಿಗೂ ಸಹಾ ಪ್ರಾಧಿಕಾರದ ಮುಂದೆ ಬಂದು ಲಿಖಿತ ಸಮಜಾಯಿಷಿ ಸಲ್ಲಿಸಿರುವುದಿಲ್ಲ. ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲಿಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು

ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ ಮತ್ತು ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**"ಆದೇಶ"**

ಶ್ರೀ ಕೆ. ಭೀಮಪ್ಪ, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ.ಸಿಎ ಡಬ್ಲ್ಯು. 3928 (ಲೈಲ್ಯಾಂಡ್ ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 6ನೇ ಜುಲೈ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಿಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)
ಪಿ.ಆರ್. 1025 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಿ.ಟಿ.ಸಿ.ಆರ್. ಸಂಖ್ಯೆ: 825/2002-03, ದಿನಾಂಕ: 6ನೇ ಜುಲೈ 2004**

**ಕುದುರೆಮುಖ ಪೊ.ಠಾ. ಕ್ರೈಂ ಸಂ.10/2003 ದಿನಾಂಕ: 19ನೇ ಮಾರ್ಚ್, 2003**

**ಅಬಕಾರಿ ಉಪ ನಿರೀಕ್ಷಕರು, ಮೂಡಿಗೆರೆ ಉಪ ವಲಯ ಇವರ ಪ್ರ ವ ವ ಸಂಖ್ಯೆ: 30/2002-03, ದಿನಾಂಕ: 1ನೇ ಏಪ್ರಿಲ್, 2003**

**ಉಪಸ್ಥಿತರು**

ಶ್ರೀ ಕೆ. ಭೀಮಪ್ಪ

ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಫಿರ್ಯಾದುದಾರರು:** | **ವಿರುದ್ಧ** | **ಆಪಾದಿತರು** |
|---|---|---|
| 1. ಆರಕ್ಷಕ ಉಪ ನಿರೀಕ್ಷಕರು, ಕುದುರೆಮುಖ ಪೊ.ಠಾಣೆ. | | 1. ಆರೋಪಿ ಪತ್ತೆಯಾಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 19.03.2003ರಂದು ಆರಕ್ಷಕ ಉಪ ನಿರೀಕ್ಷಕರು, ಕುದುರೆಮುಖ ಪೊಲೀಸ್ ಠಾಣೆ, ಇವರು ಮೂಡಿಗೆರೆ ತಾಲ್ಲೂಕು, ಕಳಸ ಹೋಬಳಿ, ಸಂಸೆ ಗ್ರಾಮದ ಕಟ್ನೀರ್ ಪಾಲ್, ಕಳಸ: ಮಂಗಳೂರು ರಸ್ತೆಯಲ್ಲಿರುವ ಸಣ್ಣ ಸೇತುವೆಯಿಂದ ಸುಮಾರು 20 ಅಡಿ ದೂರದಲ್ಲಿ ವಾಹನ ಸಂಖ್ಯೆ: ಎಂ.ಇ.ಎಂ. 9128 (ಲಾರಿ) ಅನ್ನು ಅನುಮಾನಗೊಂಡು ತಡೆದು ನಿಲ್ಲಿಸಿದಾಗ ಆರೋಪಿಗಳು ವಾಹನವನ್ನು ಸ್ಥಳದಲ್ಲಿಯೇ ಬಿಟ್ಟು ತಪ್ಪಿಸಿಕೊಂಡಿರುತ್ತಾರೆ. ಹೆಸರು ವಿಳಾಸ ಪತ್ತೆಯಾಗಿರುವುದಿಲ್ಲ. ನಂತರ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 1760.400 ಲೀಟರ್ ಬ್ಯಾಗ್ ಪೈಪರ್ ವಿಸ್ಕಿ ತೆರಿಗೆ ರಹಿತ ಭಾರತೀಯ ಮದ್ಯವಿದ್ದು, ಸದರಿ ಮದ್ಯಕ್ಕೆ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿ ಯಾರೂ ಇರುವುದಿಲ್ಲ. ವಾಹನದೊಳಗೆ ಸಂಬಂಧಪಟ್ಟ ದಾಖಲಾತಿಗಳು ಲಭ್ಯವಿಲ್ಲದೆ ಇರುವುದರಿಂದ, ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಭಾರತೀಯ ತೆರಿಗೆ ರಹಿತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಠಾಣೆಯ ಕ್ರೈಂ ಸಂಖ್ಯೆ: 10/2003ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಮೂಡಿಗೆರೆ ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. 30/2002-03, ದಿನಾಂಕ: 01.04.2003ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶೀಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಜಿಲ್ಲೆ, ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲಿಕರಾದ ಶ್ರೀ ಮುಯಿಂ ಅಹಮದ್ ಬಿನ್ ಅಬ್ದುಲ್ ಟಪ್, ನಂ. 66, ಇಡಬ್ಲ್ಯೂಎಸ್. ಕಾಲೋನಿ, ಬಡಾ ಮಕಾನ್, ಮೈಸೂರು, ಇವರು ವಾಹನದ ಮಾಲಿಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ

ಕಛೇರಿ, ಚಿಕ್ಕಮಗಳೂರು, ಇವರು ವಾಹನಕ್ಕೆ ರೂ. 1,27,350/- (ಒಂದು ಲಕ್ಷದ ಇಪ್ಪತ್ತೇಳು ಸಾವಿರದ ಮೂರು ನೂರ ಐವತ್ತು ರೂಪಾಯಿಗಳು ಮಾತ್ರ)ಗಳ ಬೆಲೆಯನ್ನು ನಿಗಧಿಪಡಿಸಿ ವರದಿಯನ್ನು ನೀಡಿರುತ್ತಾರೆ.

ವಾಹನದ ಮಾಲಿಕರಾದ ಶ್ರೀ ಮುಯಿಂ ಅಹಮದ್ ಬಿನ್ ಅಬ್ದುಲ್ ಟಪ್, ನಂ.66, ಇಡಬ್ಲ್ಯೂ ಎಸ್. ಕಾಲೋನಿ, ಬಡಾ ಮಕಾನ್, ಮೈಸೂರು, ಇವರಿಗೆ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿದ್ದು, ದಿನಾಂಕ: 11/08/2003ರಂದು ಸ್ವೀಕೃತಿಯೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ. ಸದರಿ ವಾಹನದ ಮಾಲಿಕರಿಗೆ ಮತ್ತೊಮ್ಮೆ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮಕೈಕೊಂಡಿದ್ದು, ದಿನಾಂಕ:24.04.2004ರಂದು "ಇನ್ ಸಫಿಶಿಯಂಟ್ ಅಡ್ರೆಸ್ ಹೆನ್ಸ್ ರಿಟರ್ನ್ಡ್‌ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ದಿನಾಂಕ: 10.04.2004ರಂದು ಮೈಸೂರು ಆವೃತ್ತಿ, ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ವಾಹನಕ್ಕೆ ಸಂಬಂಧಿಸಿದ 30 ದಿನಗಳೊಳಗಾಗಿ ವಾಹನದ ಮೇಲೆ ಹಕ್ಕು ಸಾಧಿಸಲು ಸಂಬಂಧಪಟ್ಟ ಅಧಿಕೃತ ದಾಖಲಾತಿಯೊಂದಿಗೆ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಲು ವಾಹನದ ಮಾಲೀಕರಿಗೆ ಅಂತಿಮ ಕಾಲಾವಕಾಶ ನೀಡಲಾಗಿದ್ದು, ಸದರಿ ಅವಧಿಯೊಳಗೆ ಯಾವುದೇ ಮನವಿ ಬಾರದೇ ಇದ್ದಲ್ಲಿ ಏಕ ಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. 30 ದಿನಗಳು ಕಳೆದರೂ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರೂ ಹಾಜರಿರುವುದಿಲ್ಲ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 1760.400 ಲೀ. ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 1756.485 ಲೀಟರ್ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಒಂದು ವರ್ಷ, ಮೂರು ತಿಂಗಳಿಗೂ ಮೇಲ್ಪಟ್ಟಿದ್ದು, ವಾಹನದ ಮಾಲಿಕರಿಗೆ ನೋಟೀಸ್ ಜಾರಿಯಾಗಿದ್ದರೂ, ಈವರೆವಿಗೂ ಸಹಾ ಪ್ರಾಧಿಕಾರದ ಮುಂದೆ ಬಂದು ಲಿಖಿತ ಸಮಜಾಯಿಷಿ ಸಲ್ಲಿಸಿರುವುದಿಲ್ಲ. ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲಿಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**"ಆದೇಶ"**

ಶ್ರೀ ಕೆ. ಭೀಮಪ್ಪ, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ.ಎಂಇಎಂ 9128 (ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 6ನೇ ಜುಲೈ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಿಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 1026

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯ ನಡವಳಿಕೆಗಳು**

**ನಂ. ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್.19:91-92, ದಿನಾಂಕ: 25ನೇ ಮೇ, 2004**

**ವಿಷಯ :** ಬಂಗಾರಪೇಟೆ ತಾಲ್ಲೂಕು ಶ್ರೀ ವೆಂಕಟೇಶ್ವರ ಬಳಕೆದಾರರ ಸಹಕಾರ ಸಂಘ (ನಿ) ರಾಬರ್ಟ್‌ಸನ್‌ಪೇಟೆ, ಕೆ.ಜಿ.ಎಫ್, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:19:91-92, ದಿನಾಂಕ:31.12.91 ಮತ್ತು 10.09.2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ರವರ ಪತ್ರದ ಸಂಖ್ಯೆ:ಸನಿ.49:ಎಲ್‌ಕ್ಯೂಡಿ:ಸಿಆರ್.11:2004-05, ದಿನಾಂಕ: 24.05.2004.

**ಪ್ರಸ್ತಾವನೆ:**

ಬಂಗಾರಪೇಟೆ ತಾಲ್ಲೂಕು ಶ್ರೀ ವೆಂಕಟೇಶ್ವರ ಬಳಕೆದಾರರ ಸಹಕಾರ ಸಂಘ(ನಿ) ರಾಬರ್ಟ್‌ಸನ್‌ಪೇಟೆ, ಕೆ.ಜಿ.ಎಫ್. ಈ ಸಂಘವು ಸರಿಯಾಗಿ ಆಡಳಿತ ನಡೆಸದೆ ಇದ್ದ ಕಾರಣ ಸದರಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ನಂತರ ಅವರ ಬದಲಿಗೆ ಹಿರಿಯ ನಿರೀಕ್ಷಕರು, ನಿಯಮ

441, ಕೋಲಾರ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ (ನಿ) ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಲಾಗಿತ್ತು.

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ಸಮಾಪನಾಧಿಕಾರಿಗಳು ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ಕೋರಿ ಪ್ರಸ್ತಾವನೆ ಸಲ್ಲಿಸಿದ್ದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ, ಇವರು ಈ ಕೆಳಕಂಡಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಶ್ರೀ ವೆಂಕಟೇಶ್ವರ ಬಳಕೆದಾರರ ಸಹಕಾರ ಸಂಘ (ನಿ) ಕೆ.ಜಿ.ಎಫ್. ಬಂಗಾರಪೇಟೆ ತಾಲ್ಲೂಕು. ಈ ಸಂಘದ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಕ್ರಮ ಕೈಗೊಳ್ಳಬೇಕೆಂದು ಅರ್ಜಿ ಸಲ್ಲಿಸಿದ್ದು, ನಂತರ ಸಮಾಪನಾಧಿಕಾರಿಗಳು ದಿನಾಂಕ: 24.05.2004ರಂದು ಠರಾವು ಮಾಡಿ, ಸದರಿ ಅರ್ಜಿಯನ್ನು ಪರಿಶೀಲಿಸಿ ಸಂಘದ ಸದಸ್ಯರ ಮುಂದೆ ಬಂದು ಸಂಘವನ್ನು ಪುನಶ್ಚೇತನಗೊಳಿಸಲು ಮನವಿ ಮಾಡಿಕೊಂಡಿರುವುದರಿಂದ ಸಂಘದ, ಸದಸ್ಯರ, ಸಾರ್ವಜನಿಕರ ಹಿತದೃಷ್ಟಿಯಿಂದ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ಕೋರಿರುತ್ತಾರೆ.

ಋಣ ಸಮಾಪನೆಯಲ್ಲಿರುವ ಶ್ರೀ ವೆಂಕಟೇಶ್ವರ ಬಳಕೆದಾರರ ಸಹಕಾರ ಸಂಘ (ನಿ) ರಾಬರ್ಟ್‌ಸನ್‌ಪೇಟೆ, ಕೆ.ಜಿ.ಎಫ್ ಬಂಗಾರಪೇಟೆ ತಾಲ್ಲೂಕು, ಈ ಸಂಘವನ್ನು ಪುನಃಶ್ಚೇತನಗೊಳಿಸುವುದರಿಂದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಪ್ರಯೋಜನ ಇದ್ದು ಪುನಃಶ್ಚೇತನಗೊಳಿಸಬೇಕೆಂದು ಸಂಘದ ಸಮಾಪನಾಧಿಕಾರಿಗಳು ಮತ್ತು ಸದಸ್ಯರು ಕೋರಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ, ಇವರ ಶಿಫಾರಸ್ಸನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69:ಸಿಎಲ್‌ಎಂ:2001 ದಿನಾಂಕ: 21.11.2001ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು, ಶ್ರೀ ವೆಂಕಟೇಶ್ವರ ಬಳಕೆದಾರರ ಸಹಕಾರ ಸಂಘ (ನಿ), ಕೆ.ಜಿ.ಎಫ್. ಬಂಗಾರಪೇಟೆ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಗಳನ್ನು ನೇಮಕ ಮಾಡಿರುವ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಃಶ್ಚೇತನಗೊಳಿಸಲಾಗಿದೆ ಎಂದು ಆದೇಶವನ್ನು ಹೊರಡಿಸಿರುತ್ತೇನೆ. ಹಾಗೂ ಈ ಕೆಳಕಂಡ ಷರತ್ತಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಿದೆ.

**ಷರತ್ತುಗಳು:**

1) ಸಂಘವು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, ನಿಯಮ ಮತ್ತು ಸಂಘದ ಉಪನಿಯಮಗಳಲ್ಲಿ ಹೇಳಿರುವ ಪ್ರಕಾರ ಸರ್ವಸದಸ್ಯರ ಸಭೆ ನಡೆಸಲು ಹಾಗೂ ಆಡಳಿತ ಮಂಡಳಿಯನ್ನು ರಚಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು.

2) ಸಂಘದ ಆಸ್ತಿ-ಜವಾಬ್ದಾರಿಗಳನ್ನು ಹಾಲಿ ಇದ್ದಂತೆ ಚಾಲ್ತಿ ಲೆಕ್ಕಗಳನ್ನು ಮುಂದುವರೆಸಿಕೊಂಡು ಹೋಗುವುದು.

3) ಸಮಾಪನಾಧಿಕಾರಿಗಳು ತಮ್ಮ ಅವಧಿಯಲ್ಲಿ ವ್ಯವಹಾರಗಳನ್ನು ಮಾಡಿದ್ದಲ್ಲಿ ಲೆಕ್ಕಗಳನ್ನು ಅಳವಡಿಸಿಕೊಂಡು ಕಲಂ 63ರ ರೀತ್ಯಾ ಲೆಕ್ಕಪರಿಶೋಧನೆಗೆ ಒಳಪಡಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 25.05.2004ರಂದು ಹೊರಡಿಸಿದೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1027

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು-01.**

**ಅಧಿಸೂಚನೆ**

**ಸಂಖ್ಯೆ: ಕೃಮಾಇ: 200:ನಿಯವಿ:2003, ದಿನಾಂಕ: 15ನೇ ಜುಲೈ, 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ 27ನೇ ಕರ್ನಾಟಕ ಅಧಿನಿಯಮ) ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾದ ಈ ಕೆಳಕಂಡ ಅಧಿಸೂಚನೆಗಳಲ್ಲಿ (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಕರ್ನಾಟಕದಲ್ಲಿನ ಮಾರುಕಟ್ಟೆಗಳ ಮುಖ್ಯಾಧಿಕಾರಿ, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರವಾರ ಇದರ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಕೃಷಿ ಉತ್ಪನ್ನಗಳ ನಿಯಂತ್ರಿತ ಮಾರಾಟಕ್ಕಾಗಿ (1) ಸದಾಶಿವಗಡ (ಚಿತ್ತಾಕುಲ) (2) ಬಿಣಗಾ (3) ಚೆಂಡಿಯಾ (4) ಅಮದಳ್ಳಿ (5) ಅರ್ಗಾ (6) ಮಾಜಾಳಿ (7) ಕದ್ರಾ ಮತ್ತು (8) ಅಂಕೋಲಾ ಪ್ರದೇಶಗಳನ್ನು ಉಪ ಮಾರುಕಟ್ಟೆ ಎಂದು ಸದರಿ ಅಧಿಸೂಚನೆಗಳ ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳನ್ನು ಉಪ ಮಾರುಕಟ್ಟೆ ಪ್ರಾಂಗಣಗಳೆಂದು ಘೋಷಿಸಿದ್ದರು.

1. ಸಂಖ್ಯೆ: ಎಂಡಿ:ಇಎಂ:ಸಿಆರ್: 214:ಆರ್ ಅಂಡ್ ಇ: 78-79, ದಿನಾಂಕ: 21.07.1978.
2. ಸಂಖ್ಯೆ: ಕೃಮಾಇ: 291: ನಿಯವಿ: 88, ದಿನಾಂಕ: 29.08.1989.
3. ಸಂಖ್ಯೆ: ಕೃಮಾಇ: 170: ನಿಯವಿ: 92, ದಿನಾಂಕ: 31.10.1994.

ಈಗ ಕದ್ರಾ ಮತ್ತು ಅಂಕೋಲಾ ಉಪ ಮಾರುಕಟ್ಟೆಗಳಲ್ಲಿ ಮಾತ್ರ ನಿಯಂತ್ರಿತ ಹುಟ್ಟುವಳಿಗಳ ಮಾರಾಟದ ವ್ಯವಹಾರ ಜರುಗುತ್ತಲಿದ್ದು ಉಳಿದ 6 ಉಪ ಮಾರುಕಟ್ಟೆಗಳಾದ ಸದಾಶಿವಗಡ (ಚಿತ್ತಾಕುಲ), ಬಿಣಗಾ, ಚೆಂಡಿಯಾ, ಅಮದಳ್ಳಿ, ಅರ್ಗಾ ಮತ್ತು ಮಾಜಾಳಿ ಪ್ರದೇಶಗಳಲ್ಲಿ ನಿಯಂತ್ರಿತ ಹುಟ್ಟುವಳಿಗಳ ಆವಕವು ಇರದೇ ವಾರದ ಸಂತೆಯಾಗಲಿ ಅಥವಾ ಸಗಟು ವ್ಯವಹಾರವಾಗಲೀ ನಡೆಯುತ್ತಿಲ್ಲ.

ಮತ್ತು ಆದ ಕಾರಣ, ಕಾರವಾರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ವ್ಯಾಪ್ತಿಯ ಸದರಿ 6 ಉಪಮಾರುಕಟ್ಟೆಗಳನ್ನು ರದ್ದುಪಡಿಸಲು ಈ ಕಛೇರಿಯ ಸಮ ಸಂಖ್ಯೆಯ ದಿನಾಂಕ: 19.08.2003ರ ಅಧಿಸೂಚನೆಯಲ್ಲಿ ಉದ್ದೇಶಿಸಲಾಗಿತ್ತು. ಈ ಸಂಬಂಧ ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಸ್ವೀಕೃತವಾಗಿರುವುದಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಕಾರವಾರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆಗಳ ಮೂಲಕ ಕಾಲಕಾಲಕ್ಕೆ ಘೋಷಿಸಲಾದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಗಳ ಮೂಲಕ ಘೋಷಿಸಲಾದ ಸದಾಶಿವಗಡ (ಚಿತ್ತಾಕುಲ), ಬಿಣಗಾ, ಚೆಂಡಿಯಾ, ಅಮದಳ್ಳಿ, ಅರ್ಗಾ ಮತ್ತು ಮಾಜಾಳಿ ಉಪ ಮಾರುಕಟ್ಟೆಗಳನ್ನು ಹಾಗೂ ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ಸೀಮಾಬದ್ಧ ಸ್ಥಳದ ಉಪ ಮಾರುಕಟ್ಟೆ ಪ್ರಾಂಗಣಗಳನ್ನು ರದ್ದುಪಡಿಸಲಾಗಿದೆ.

ಪಿ.ಆರ್. 1028

**ಸೈಯದ್ ಜಮೀರ್ ಪಾಷಾ**
ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿಗಳು

**ವಿಷಯ :** ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧ ಶಿಸ್ತು ಕ್ರಮ.

**ಉಲ್ಲೇಖ :**
1. ಈ ಕಛೇರಿಯ ತಿಳುವಳಿಕೆ ಪತ್ರದ ಸಂಖ್ಯೆ: ಸಿ3: ಶಿಸ್ತು: ಲಿಪಿಕ:08:01-02, ದಿನಾಂಕ: 30.11.2001.
2. ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರ ದಿನಾಂಕ: 28.12.2001ರಂದು ನೀಡಿರುವ ಲಿಖಿತ ಹೇಳಿಕೆ.
3. ಈ ಕಛೇರಿಯ ಆದೇಶ ಸಂಖ್ಯೆ: ಸಿ3:ಶಿಸ್ತು:ಲಿಪಿಕ:08:2001-02, ದಿನಾಂಕ: 16.04.2002.
4. ರೇಷ್ಮೆ ಉಪನಿರ್ದೇಶಕರು ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ರೇಉನಿ:ಮೇದ:ಬಿಎಸ್‌ಜ:16:ವಿ:02-03, ದಿನಾಂಕ: 31.05.2003.
5. ತಿಳುವಳಿಕೆ ಪತ್ರದ ಸಂಖ್ಯೆ: ಸಿ3:ಶಿಸ್ತು:ಲಿಪಿಕ:08:01-02, ದಿನಾಂಕ: 21.07.2003.

**ಪೀಠಿಕೆ:**

ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರು ದಿನಾಂಕ: 12.06.99ರಿಂದ ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗಿದ್ದು, ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರನ್ನು ರೇಷ್ಮೆ ಇಲಾಖೆಯಿಂದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ದಾವಣಗೆರೆ ಇಲ್ಲಿ ಎರವಲು ಸೇವೆಯ ಮೇರೆಗೆ ಕಾರ್ಯ ನಿರ್ವಹಿಸುತ್ತಿದ್ದು, ಅಲ್ಲಿಂದ ದಿನಾಂಕ: 12.06.99ರಂದು ಕಾರ್ಯವಿಮುಕ್ತಿ ಹೊಂದಿರುತ್ತಾರೆ. ಕಾರ್ಯ ವಿಮುಕ್ತಿ ಹೊಂದಿದ ನಂತರ ಇವರು ಮತ್ತೆ ಸ್ಥಳ ನಿಯುಕ್ತಿಗಾಗಿ ಕೇಂದ್ರ ಕಛೇರಿಯಲ್ಲಿ ಕಾರ್ಯವರದಿ ಮಾಡಿಕೊಂಡು ನಿರ್ದೇಶನಾಲಯದಲ್ಲಿ ಹುದ್ದೆಗೆ ಕಾಯುವವರ ಹಾಜರಾತಿಯಲ್ಲಿ ಸಹಿ ಮಾಡಬೇಕಾಗಿರುತ್ತದೆ. ಹಾಗೂ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡುವವರೆಗೂ ಸ್ಥಳ ನಿರೀಕ್ಷಣೆಯಲ್ಲಿ ಸಹಿ ಮಾಡಬೇಕಾಗಿರಬೇಕಾಗುತ್ತದೆ. ಆದರೆ ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರು ಈ ಕ್ರಮವನ್ನು ಅನುಸರಿಸದೆ ಹಾಗೂ ಯಾವುದೇ ಮಾಹಿತಿ ನೀಡದೆ ಗೈರು ಹಾಜರಿಯಾಗಿರುತ್ತಾರೆ. ಇದರಿಂದ ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು, ಇವರಿಗೆ ದಿನಾಂಕ: 27.12.99ರಂದು ಕಾರಣ ಕೇಳಿ ನೋಟಿಸು ನೀಡಿ, ಅನಧಿಕೃತವಾಗಿ ಗೈರು ಹಾಜರಿಯಾಗಿರುವ ಬಗ್ಗೆ ವಿವರಣೆ ಕೇಳಲಾಗಿತ್ತು. ಹಾಗೂ ವಿವರಣೆ ನೀಡದಿದ್ದಲ್ಲಿ ಶಿಸ್ತು ಕ್ರಮ ಜರುಗಿಸಲಾಗುವುದೆಂದು ಸಹ ತಿಳಿಸಲಾಗಿತ್ತು. ಆದರೂ ಇವರಿಂದ ಯಾವುದೇ ಪ್ರತಿಕ್ರಿಯೆ ಬಂದಿಲ್ಲವಾದುದರಿಂದ ಇವರ ದುರ್ನಡತೆ ಹಾಗೂ ಸರಕಾರಿ ಕೆಲಸದಲ್ಲಿ ಇವರ ಅಶ್ರದ್ಧೆ ಹಾಗೂ ನಿರಾಸಕ್ತಿ ಗಮನಿಸಿ ಶಿಸ್ತು ಪ್ರಾಧಿಕಾರವು ಶಿಸ್ತುಕ್ರಮ ಜರುಗಿಸಲು ನಿರ್ಧರಿಸಿ ಉಲ್ಲೇಖ (1)ರಂತೆ 1957 ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ರ ಮೇರೆಗೆ ತಿಳುವಳಿಕೆ ಪತ್ರವನ್ನು ಆರೋಪ ಪಟ್ಟಿಯೊಂದಿಗೆ ಜಾರಿ ಮಾಡಿ ಆರೋಪ ಕುರಿತಂತೆ 15 ದಿನಗಳ ಒಳಗೆ ಲಿಖಿತ ಹೇಳಿಕೆಯನ್ನು ನೀಡುವಂತೆ ಸೂಚಿಸಲಾಯಿತು. ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರು ಆರೋಪ ಪಟ್ಟಿಯನ್ನು ಸ್ವೀಕರಿಸಿ, ಉಲ್ಲೇಖ (2)ರಂತೆ ಲಿಖಿತ ಹೇಳಿಕೆ ನೀಡಿ, ಆರೋಪಕ್ಕೆ ಸಂಬಂಧಿಸಿದಂತೆ ಲಿಖಿತ ಹೇಳಿಕೆ ನೀಡಲು ಒಂದು ತಿಂಗಳ ಕಾಲಾವಕಾಶ ಕೋರಿರುತ್ತಾರೆ. ಆದರೆ ಒಂದು ತಿಂಗಳ ಕಾಲಾವಕಾಶದಲ್ಲಿ ಯಾವುದೇ ಲಿಖಿತ ಹೇಳಿಕೆ ನೀಡಲು ಇವರು ವಿಫಲರಾಗಿರುತ್ತಾರೆ. ಆದುದರಿಂದ ಶಿಸ್ತು ಪ್ರಾಧಿಕಾರವು ಈ ಆರೋಪದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ವಿಚಾರಣಾಧಿಕಾರಿಯವರನ್ನು ನೇಮಿಸಲು ನಿರ್ಧರಿಸಿ ಉಲ್ಲೇಖ (3)ರಲ್ಲಿ ಆದೇಶಿಸಲಾಯಿತು.

ವಿಚಾರಣಾಧಿಕಾರಿಗಳು ನಿಯಮ (11)ರಡಿಯಲ್ಲಿ ನಿರ್ದಿಷ್ಟಪಡಿಸಿರುವ ಎಲ್ಲಾ ವಿಧಿ ವಿಧಾನಗಳನ್ನು ಅನುಸರಿಸಿ ವಿಚಾರಣೆ ನಡೆಸಿ, ವಿಚಾರಣೆ ವರದಿಯನ್ನು ಎಲ್ಲಾ ದಾಖಲಾತಿಗಳೊಂದಿಗೆ ಶಿಸ್ತು ಪ್ರಾಧಿಕಾರಕ್ಕೆ ಉಲ್ಲೇಖ (4)ರಲ್ಲಿ ಒದಗಿಸಿರುತ್ತಾರೆ. ಶಿಸ್ತು ಪ್ರಾಧಿಕಾರವು

ವಿಚಾರಣಾ ವರದಿಯನ್ನು ಪರಿಶೀಲಿಸಿ ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದರಿಂದ ವಿಚಾರಣಾಧಿಕಾರಿಗಳ ನಿರ್ಣಯವನ್ನು ಉಲ್ಲೇಖ (5)ರ ತಿಳುವಳಿಕೆ ಪತ್ರದೊಂದಿಗೆ ಆಪಾದಿತರಿಗೆ ಜಾರಿಗೊಳಿಸಲಾಯಿತು. ಆಪಾದಿತರು ವಿಚಾರಣಾ ವರದಿಯನ್ನು ಸ್ವೀಕರಿಸಿ ಸ್ವೀಕೃತಿ ನೀಡಿರುತ್ತಾರೆ. ಆದರೆ ವಿಚಾರಣಾಧಿಕಾರಿಗಳ ನಿರ್ಣಯದ ಮೇಲೆ ತಮ್ಮ ಲಿಖಿತ ಹೇಳಿಕೆಯನ್ನು ನೀಡಲು ವಿಫಲರಾಗಿರುತ್ತಾರೆ.

ಶಿಸ್ತು ಪ್ರಾಧಿಕಾರವು ಈ ಆರೋಪದ ಸಂಬಂಧವಾಗಿ ವಿಚಾರಣಾಧಿಕಾರಿಯ ನಿರ್ಣಯ ಆರೋಪಕ್ಕೆ ಸಂಬಂಧಿಸಿದ ಸಾಕ್ಷಿಗಳ ಹೇಳಿಕೆ ವಿಚಾರಣೆಯಲ್ಲಿ ಪರೀಕ್ಷಿಸಲ್ಪಟ್ಟ ದಾಖಲಾತಿಗಳನ್ನು ಪರಿಶೀಲಿಸಿದೆ. ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು, 12.06.99ರಂದು ಜಿಲ್ಲಾ ಪಂಚಾಯತ್, ದಾವಣಗೆರೆಯಿಂದ ಕಾರ್ಯವಿಮುಕ್ತಿಗೊಂಡ ನಂತರ ತಕ್ಷಣ ಮಾತ್ರ ಇಲಾಖೆಯಲ್ಲಿ ಸ್ಥಳ ನಿಯುಕ್ತಿಗಾಗಿ ಪ್ರಧಾನ ಕಛೇರಿಯಲ್ಲಿ ಸೂಕ್ತ ಆದೇಶ ಪಡೆಯದೆ ಕೆಲಸಕ್ಕೂ ಹಾಜರಾಗದೇ ಇರುವುದು ವಿಚಾರಣಾ ವರದಿಯಿಂದ ದೃಢಪಡುತ್ತದೆ. ಈ ಸಂಬಂಧ ನಡೆಸಿದ ವಿಚಾರಣೆಯಲ್ಲಿ ಸದರಿಯವರಿಗೆ ದಿನಾಂಕ: 07.08.2002, 11.02.2002, 22.07.2002 ಮತ್ತು ದಿನಾಂಕ: 06.01.2003ರಂದು ವಿಚಾರಣೆಗೆ ಹಾಜರಾಗಲು ವಿಚಾರಣಾ ನೋಟಿಸುಗಳನ್ನು ಕಳುಹಿಸಲಾಗಿತ್ತು. ಕೆಲವು ವಿಚಾರಣಾ ನೋಟಿಸನ್ನು ಸ್ವೀಕರಿಸಿ ಸ್ವೀಕೃತಿ ನೀಡಿರುತ್ತಾರೆ. ಹಾಗೂ ಕೆಲವು ಪತ್ರಗಳು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಆದರೆ ಇವರು ಇಲಾಖಾ ವಿಚಾರಣೆಗೂ ಹಾಜರಾಗದಿರುವುದು ಕಂಡುಬರುತ್ತದೆ. ಈ ಸಂಬಂಧ ವಿಚಾರಣೆಗೆ ಹಾಜರಾದ ಸಾಕ್ಷಿದಾರರು ಶ್ರೀ ಟಿ.ಎಸ್. ಜಯದೇವ್ ಇವರು ಜಿಲ್ಲಾ ಪಂಚಾಯ್ತಿ, ದಾವಣಗೆರೆಯಿಂದ ಕಾರ್ಯವಿಮುಕ್ತಿ ಹೊಂದಿದ ನಂತರ ಪ್ರಧಾನ ಕಛೇರಿಯಲ್ಲಿ ಸ್ಥಳ ನಿಯುಕ್ತಿಗೆ ಹಾಜರಾಗದ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ.

ಮೇಲಿನ ವಾಸ್ತವಾಂಶಗಳನ್ನು ಗಮನಿಸಿದಾಗ ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರಿಗೆ ಸಾಕಷ್ಟು ಕಾಲಾವಕಾಶ ನೀಡಿದರೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಹಾಗೂ ವಿಚಾರಣೆ ನಡೆಸಿದರೂ ವಿಚಾರಣೆಗೆ ಹಾಜರಾಗಿರುವುದಿಲ್ಲ. ಇದರಿಂದ ಇವರಿಗೆ ಸರಕಾರಿ ಕೆಲಸದಲ್ಲಿ ಯಾವುದೇ ಆಸಕ್ತಿ ಇಲ್ಲದಿರುವುದು ದೃಢಪಟ್ಟಿದೆ. ಇಂತಹ ನೌಕರರನ್ನು ಸೇವೆಯಲ್ಲಿ ಮುಂದುವರೆಸುವುದು ನ್ಯಾಯ ಸಮ್ಮತವಲ್ಲವೆಂದು ತೀರ್ಮಾನಿಸಿ, ಈ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಸಿ3:ಶಿಸ್ತು:ಲಿಪಿಕ:08:2001-02, ದಿನಾಂಕ: 16ನೇ ಡಿಸೆಂಬರ್, 2003**

ಮೇಲೆ ವಿವರಿಸಿರುವ ಅಂಶಗಳನ್ವಯ ಮತ್ತು 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು: ಶಿಸ್ತು ಪ್ರಾಧಿಕಾರಿಯಾದ ನಾನು ಸದರಿ ನಿಯಮ 8(vii) ರಲ್ಲಿ ನಿರ್ದಿಷ್ಟಪಡಿಸಿರುವಂತೆ, ಶ್ರೀ ಟಿ.ಎಸ್. ಜಯದೇವ್, ಪ್ರಥಮ ದರ್ಜೆ ಸಹಾಯಕರು ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸರಕಾರಿ ಸೇವೆಯಿಂದ ತೆಗೆದು ಹಾಕಿ ಆದೇಶಿಸಿರುತ್ತೇನೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು
ಹಾಗೂ ರೇಷ್ಮೆ ನಿರ್ದೇಶಕರು, ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 1029

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂ: ಕಾಪಕಾ:ಎಫ್:ಎಸ್ಆರ್ 18:2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ಶ್ರೀ ಅಬ್ದುಲ್ ಬಷೀರ್ ಬಿನ್ ದಿವಂಗತ ಮುಕ್ತುಂ ಸಾಬ್ 58 ವರ್ಷ. | | 1. ಶ್ರೀ ಶಂಕರ್‌ಶೆಟ್ಟಿ, ವಾಸ: ಚಿಕ್ಕೂರು, ಬಾಣಾವರ ಹೋಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. |
| 2. ಶ್ರೀಮತಿ ಶಾಕೀರಾ ಬಿ. ಕೋಂ ಅಬ್ದುಲ್ ಬಷೀರ್, ವಾಸ: ಬಾಬಾಸಾಬ್ ಕಾಲೋನಿ, ಅರಸೀಕೆರೆ, ಹಾಸನ ತಾಲ್ಲೂಕು. | | 2. ಶ್ರೀ ಬಿ.ಕೆ. ವೆಂಕೋಜಿರಾವ್ ಬಿನ್ ಕೆಂಗಣ್ಣ, ವಿದ್ಯುತ್ ಗುತ್ತಿಗೆದಾರರು ಸಿನಿಮಾ ಮಂದಿರ ಮುಂಭಾಗ, ಬಾಣಾವರ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕಬೀರ್ ಅಹಮದ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 18.11.2001ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1030

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂ: ಕಾಪಕಾ:ಎಫ್:ಎಸ್‌ಆರ್ 19:2003-04**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಶ್ರೀ ಚಂದ್ರಯ್ಯ, 42 ವರ್ಷ.
2. ಶ್ರೀಮತಿ ಜಯಮ್ಮ ಕೋಂ ಚಂದ್ರಯ್ಯ, 36 ವರ್ಷ,
3. ಕು: ನೇತ್ರ ಬಿನ್ ಚಂದ್ರಯ್ಯ, 18 ವರ್ಷ.
4. ನಳಿನ ಬಿನ್ ಚಂದ್ರಯ್ಯ, 14 ವರ್ಷ.
   ವಾಸ: ಮರ್ಕುಲಿ ವಿಲೇಜ್ ಮತ್ತು ಅಂಚೆ,
   ಶಾಂತಿಗ್ರಾಮ ಹೋಬಳಿ, ಹಾಸನ ತಾಲ್ಲೂಕು.

ಪ್ರತಿವಾದಿಗಳು:

1. ಶ್ರೀ ಚನ್ನವೀರ ಬಿನ್ ತಿಮ್ಮಯ್ಯ, ವಾಸ ಮೇಘಲ ಹೊಸಕೊಪ್ಪಲು, ಕಸಬಾ ಹೋಬಳಿ, ಹಾಸನ ತಾಲ್ಲೂಕು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸತೀಶ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 09.02.2003ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1031

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂ: ಕಾಪಕಾ:ಎಫ್:ಎಸ್‌ಆರ್ 78:2001**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಶ್ರೀ ಸುಬ್ಬ ಬಿನ್ ಜೋಗಿ, ಕೇರಾಫ್ ಸುಂದರ, ಚೀಕನಹಳ್ಳಿ ಎಸ್ಟೇಟ್, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ.

ಪ್ರತಿವಾದಿಗಳು:

1. ರಾಜಪ್ಪನ್ ಚೆಟ್ಟಿಯಾರ್, ದೇವನರಿ ಎಸ್ಟೇಟ್, ಕಮ್ಮರಗೋಡು ಗ್ರಾಮ, ಗೋಣಿಬೀಡು ಹೋಬಳಿ, ಮೂಡಿಗೆರೆ ತಾಲ್ಲೂಕು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ದಿ: ಜೋಗಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 01.02.1995ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1032

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-24:2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ವೆಂಕಟಸ್ವಾಮಿ, ಬಿನ್ ಚಿಕ್ಕವೆಂಕಟರಾಯಪ್ಪ.
2. ಲಕ್ಷ್ಮಿನರಸಮ್ಮ ಕೋಂ ವೆಂಕಟಸ್ವಾಮಿ ಬೀಚಗಾನಹಳ್ಳಿ ವಿಲೇಜ್ ಮತ್ತು ಅಂಚೆ, ಗುಡಿಬಂಡೆ ತಾಲ್ಲೂಕು, ಕೋಲಾರ ಜಿಲ್ಲೆ.

ಪ್ರತಿವಾದಿಗಳು:

1. ದಿ ಓರಿಯಂಟಲ್ ಇನ್‌ಶೂರೆನ್ಸ್ ಕಂ.ಲಿ., ವಿಭಾಗೀಯ ಕಛೇರಿ, ಜಯಲಕ್ಷ್ಮಿ ಮ್ಯಾನ್‌ಷನ್, 2ನೇ ಮಹಡಿ, 1001:56, ಡಾ: ರಾಜ್‌ಕುಮಾರ್ ರಸ್ತೆ, 4ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10.
2. ಶ್ರೀ ವಿ. ಮನೋಹರ್ ಬಿನ್ ವಿಶ್ವನಾಥಪ್ಪ, ಬೀಚಗಾನಹಳ್ಳಿ ವಿಲೇಜ್ ಮತ್ತು ಅಂಚೆ, ಗುಡಿಬಂಡೆ ತಾಲ್ಲೂಕು, ಕೋಲಾರ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ವೆಂಕಟಸ್ವಾಮಿ ಅವರು ತಮ್ಮ ಮಗನಾದ ಶ್ರೀ ಚಲಪತಿ ಅವರು 1ನೇ ಪ್ರತಿವಾದಿ ಶ್ರೀ ವಿ. ಮನೋಹರ್ ರವರ ಬಳಿ ಕ್ಲೀನರ್ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 17.05.2004ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 09.07.2004ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1033